ಸಂಪುಟ ೧೧ ಸಂಚಿಕೆ ೨ ಜೂನ್ 1990

# ಬ್ಯಾಂಕಿಂಗ್ ಪ್ರಪಂಚ



ವಾರ್ಷಿಕ ಚಂದಾ : ರೂ. 15
ಆಜೀವ ಚಂದಾ : ರೂ. 150

ಈ ಸಂಚಿಕೆಯಲ್ಲಿ



ಸಮನ್ವಯ ಸಮಿತಿ (ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್, ನಂ. ೨೨ ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು ೫೬೦ ೦೦೨

ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ತ್ರೈಮಾಸಿಕ

ಸಂಪಾದಕೀಯ

# ಬಜೆಟ್ ಮತ್ತು ಬ್ಯಾಂಕುಗಳು

ಪ್ರತಿವರ್ಷವೂ ಕೇಂದ್ರ ಸರ್ಕಾರದ ಬಜೆಟ್ ಮಂಡನೆಯಾದಾಗ ಸಮಾಜದ ವಿವಿಧ ವರ್ಗಗಳೂ ಅರ್ಥವ್ಯವಸ್ಥೆಯ ನಾನಾ ವಲಯಗಳೂ ತಂತಮ್ಮ ದೃಷ್ಟಿಯಿಂದ ಅದಕ್ಕೆ ಪ್ರತಿಕ್ರಿಯೆ ವ್ಯಕ್ತಪಡಿಸುವುದು ಸಾಮಾನ್ಯ. ಒಂದಿಲ್ಲೊಂದು ರೀತಿಯಲ್ಲಿ, ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ, ಅದು ಎಲ್ಲರ ಮೇಲೂ ಪರಿಣಾಮ ಬೀರದೆ ಇರುವುದಿಲ್ಲ.

ಆದರೆ ಬ್ಯಾಂಕಿಂಗ್ ವಲಯದ ಮೇಲೆ ಏನು ಅದರ ಪ್ರಭಾವ ? ಅದರ ಪರಿಚಾಲನೆಯ ಮೇಲೂ ಲಾಭಪ್ರದತೆಯ ಮೇಲೂ ಏನದರ ಪರಿಣಾಮ? ಮುಂಗಡಪತ್ರದಲ್ಲಿ ಸೂಚಿತವಾದ ನಾನಾ ಕ್ರಮಗಳ ದೃಷ್ಟಿಯಲ್ಲಿ ಬ್ಯಾಂಕುಗಳು ತಮ್ಮ ರೀತಿನೀತಿಗಳನ್ನು ಹೇಗೆ ರೂಪಿಸಿಕೊಳ್ಳಬೇಕು? ಈ ಬಗ್ಗೆ ಬ್ಯಾಂಕುಗಳು ತಲೆ ಕೆಡಿಸಿಕೊಳ್ಳುವುದಿಲ್ಲ. ಎಷ್ಟಾದರೂ ಅವು (ಬಹುತೇಕ) ಸರ್ಕಾರಿ ಸ್ವಾಮ್ಯದ ಸಂಸ್ಥೆಗಳಲ್ಲವೆ?

> ಆಡುವವನೆಸೆದಂತೆ ಬೀಳ್ವ ಚೆಂಡಿಗದೇಕೆ
>     ಆಟದೊಳಗಣ ಸೋಲು ಗೆಲವುಗಳ ಗೋಜು ?
> ನಿನ್ನನಾರಿತ್ತಲೆಸೆದಿಹನೊ ಬಲ್ಲವನಾತ
>     ನೆಲ್ಲ ಬಲ್ಲವನವನು—ಬಲ್ಲನೆಲ್ಲವನು.

ಬ್ಯಾಂಕುಗಳ ಕಲಾಪಗಳಿಗೆ ನೇರವಾಗಿ ಸಂಬಂಧಿಸಿದ ವಿಚಾರಗಳನ್ನು ಹಣಕಾಸು ಮಂತ್ರಿಗಳು ಒಂದು ವೇಳೆ ಪ್ರಸ್ತಾಪಿಸಿದ್ದರೂ, ಅವುಗಳ ಬಗ್ಗೆ ಹೊಸ ಕ್ರಮಗಳನ್ನು ಸೂಚಿಸಿದ್ದರೂ, ಆ ಕುರಿತು ನೇರವಾಗಿ ಕಾರ್ಯ ಪ್ರವೃತ್ತವಾಗುವುದಕ್ಕೂ ಬ್ಯಾಂಕುಗಳಿಗೆ ಸ್ವಾತಂತ್ರ್ಯವಿಲ್ಲ. ವಿತ್ತ ಮಂತ್ರಿಗಳ ಸೂಚನೆಗಳನ್ನು ಆಧರಿಸಿ ರಿಸರ್ವ್ ಬ್ಯಾಂಕು ಸೂಚನೆ ನೀಡಿದಾಗ ಬ್ಯಾಂಕುಗಳು ಥಟ್ಟನೆ ಆ ನಿಟ್ಟಿನಲ್ಲಿ ತೊಡಗುತ್ತವೆ. ಇದು ಕ್ರಮ.

## ಚೆಲ್ಲಾಟವಲ್ಲ

ಪ್ರಮುಖ ಬ್ಯಾಂಕಿಂಗ್ ಸಂಸ್ಥೆಗಳು ಸರ್ಕಾರದ ಒಡೆತನಕ್ಕೆ ಸೇರಿದ್ದರೂ ಅವು ಮಹತ್ತ್ವಪೂರ್ಣವಾದ ಸಾರ್ವಜನಿಕ ಸಂಸ್ಥೆಗಳೆಂಬ ಅಂಶವನ್ನು ಮರೆಯುವಂತಿಲ್ಲ. ಮಧ್ಯಸ್ಥಗಾರಿಕೆ ಚ್ಯುತಿಯ ಮಾತು ಬಹಳಷ್ಟು ಕೇಳಿ ಬರುತ್ತಿದ್ದರೂ ಇಂದಿಗೂ ಬ್ಯಾಂಕುಗಳು ನಮ್ಮ ಆರ್ಥಿಕ ಕ್ಷೇತ್ರದಲ್ಲಿ ಮಹತ್ತರವಾದ ಪಾತ್ರ ನಿರ್ವಹಿಸುತ್ತಿವೆ. ಅಸಂಖ್ಯಾತ ಜನರಿಂದ ಹಣ ಸಂಗ್ರಹಿಸುತ್ತಿವೆ. ಅಗತ್ಯ ಇರುವವರಿಗೆ ಆ ಹಣವನ್ನು ವಿತರಿಸುತ್ತಿವೆ. ಉಳಿತಾಯ, ಬಂಡವಾಳವಾಗಿ ಅದರ ಪರಿವರ್ತನೆ ಮತ್ತು ವಿನಿಯೋಜನೆಯ ಚಕ್ರವನ್ನು ಪ್ರವರ್ತಿಸುವಲ್ಲಿ ಬ್ಯಾಂಕುಗಳ ಪಾತ್ರವನ್ನು ಅಲ್ಲಗಳೆಯುವಂತಿಲ್ಲ. ಸರ್ಕಾರದ ಇತರ ಇಲಾಖೆಗಳಂತೆ ಬ್ಯಾಂಕುಗಳು ಅಲ್ಲ. ಸರ್ಕಾರಕ್ಕೆ, ತನ್ಮೂಲಕ ಸಂಸತ್ತಿಗೆ, ಅವು ಉತ್ತರವಾದಿಗಳಾಗಿರುವುವಾದರೂ ವಿಶಾಲ ಜನತೆಯಿಂದ ಹಣವನ್ನು ಪಡೆದು ವಿಶಾಲ ಜನತೆಯಲ್ಲಿ ಅದನ್ನು ಚೆಲ್ಲುವ ಬ್ಯಾಂಕುಗಳು ಸಾರ್ವಜನಿಕ ದೃಷ್ಟಿಯನ್ನು ಬಿಟ್ಟುಕೊಡುವಂತಿಲ್ಲ. 'ಕೆರೆಯ ನೀರನು ಕೆರೆಗೆ ಚೆಲ್ಲುವ' ಆಟ ಬರೀ ಚೆಲ್ಲಾಟವಲ್ಲ. ಸರ್ಕಾರವಾಗಲಿ, ಬ್ಯಾಂಕುಗಳ ಈ ಮಹತ್ತ್ವದ ಮುಖವನ್ನು ಮರೆಯುವಂತಿಲ್ಲ. ಬ್ಯಾಂಕುಗಳೂ ಈ ದೃಷ್ಟಿಯಿಂದ ಸರ್ಕಾರದ ಕ್ರಮಗಳನ್ನು ಚಿಕಿತ್ಸಕ ದೃಷ್ಟಿಗೆ ಒಳಪಡಿಸುವ, ಸರ್ಕಾರದೊಂದಿಗೆ ಸಂವಾದ ನಡಸುವ, ತಮ್ಮ ಕಲಾಪಗಳ ದೃಷ್ಟಿಯಿಂದಲೂ ಸಾರ್ವಜನಿಕ ಪರಿಣಾಮ ದೃಷ್ಟಿಯಿಂದಲೂ ಸರ್ಕಾರದ ಮುಂಗಡಪತ್ರದ ಈ ಮುಖವನ್ನು ಕುರಿತು ಬಹಿರಂಗ ಚರ್ಚೆಯಲ್ಲಿ ತೊಡಗುವ ತಮ್ಮ ಹೊಣೆಯನ್ನು ಅರಿಯುವುದು ಅಗತ್ಯ.

ಆಡಳಿತ ಸೂತ್ರವನ್ನು ಕೈಯಲ್ಲಿ ಹಿಡಿದ ಕೆಲವು ರಾಜಕಾರಣಿಗಳು ಬ್ಯಾಂಕ್ ಅಧಿಕಾರಿಗಳನ್ನೂ ಇತರ ಉದ್ಯೋಗಿಗಳನ್ನೂ ಸೂತ್ರದ ಗೊಂಬೆಗಳಂತೆ ಆಡಿಸಲು ಯತ್ನಿಸಿದ್ದುಂಟು. ವ್ಯವಹಾರಯೋಗ್ಯವಲ್ಲದ, ಅನಾರ್ಥಿಕ ಮತ್ತು ಅನಾಹುತಕಾರಿಯಾದ ಯೋಜನೆಗಳನ್ನು ಘೋಷಿಸಿ, ಅವನ್ನು ಕಾರ್ಯಗತಗೊಳಿಸುವಲ್ಲಿ ಉದ್ಭವಿಸಿದ ನಾನಾ ಕೊಡಕುಗಳ ಪರಿಹಾರಕ್ಕೆ ಉಪಾಯ ಸೂಚಿಸದೆ ಬ್ಯಾಂಕ್ ಉದ್ಯೋಗಿಗಳನ್ನು ಬಹಿರಂಗವಾಗಿ ಟೀಕೆಗೆ ಗುರಿಪಡಿಸಿದ್ದೂ ಉಂಟು. ಬ್ಯಾಂಕರರು ಯಾವಾಗಲೂ ಅಗ್ಗದ ಜನಪ್ರಿಯತೆಯ ಮೇಲೆ ಕಣ್ಣಿಟ್ಟು, ಪರಂಪರಾಗತ ರೀತಿ ನೀತಿಗಳನ್ನೂ ಕಾನೂನುಗಳ ಚೌಕಟ್ಟನ್ನೂ ಗಾಳಿಗೆ ಹಾರಿಸಲಾರರು. ವೃತ್ತಿಪರರಾದ ಅವರಿಗೆ ವೃತ್ತಿಧರ್ಮವೊಂದುಂಟು. ಈ ವೃತ್ತಿಧರ್ಮಕ್ಕೂ ಲೋಕಧರ್ಮಕ್ಕೂ ವಿರಸ ಉಂಟಾಗದ ರೀತಿಯಲ್ಲಿ ಆಡಳಿತಗಾರರು ತಮ್ಮ ರಾಜಕೀಯ ನೀತಿಗಳನ್ನು ರೂಪಿಸುವುದು ಅತ್ಯಗತ್ಯ. ಇಲ್ಲದಿದ್ದರೆ ಅವರ ಉದ್ದೇಶಗಳೇ ಗಾಳಿಗೆ ತೂರಿ ಹೋಗುವ ಅಪಾಯವುಂಟು. ಇಡೀ ಅರ್ಥವ್ಯವಸ್ಥೆಯ ಹಾಗೂ ವ್ಯವಹಾರ ನೀತಿಯ ಧಾತುವೇ ನಷ್ಟವಾಗಬಹುದು. ಬ್ಯಾಂಕಿಂಗ್ ಕ್ಷೇತ್ರದಲ್ಲಿರುವವರು ಈ ವಿಚಾರ ಕುರಿತಂತೆ ಚಿಂತನೆ ನಡಸುವುದು ಅಗತ್ಯ.

## ಸಮಾಲೋಚನೆಯ ಅಗತ್ಯ

ಆದರೆ ಇಂದಿನ ಬ್ಯಾಂಕಿಂಗ್ ಸಂದರ್ಭದಲ್ಲಿ ಇಂಥ ಚಿಂತನೆ ಅಪುರೂಪದ ಮಾಲಾಗಿದೆಯೆನಿಸುತ್ತದೆ. ಬಜೆಟ್ ಮಂಡನೆಗೆ ಮುಂಚೆ ವಿತ್ತ ಮಂತ್ರಿಗಳು ಸಾಮಾನ್ಯವಾಗಿ ಅರ್ಥವ್ಯವಸ್ಥೆಯ ವಿವಿಧ ವಲಯಗಳ ಪ್ರತಿನಿಧಿಗಳೊಂದಿಗೆ ಸಂವಾದಗಳಲ್ಲಿ ನಿರತರಾಗುವುದುಂಟು. ಅವರ ಅಭಿಪ್ರಾಯಗಳನ್ನು ಪಡೆದು, ತಾವು ರೂಪಿಸುವ ಮುಂಗಡಪತ್ರದಲ್ಲಿ ಎಷ್ಟರ ಮಟ್ಟಿಗೆ ಅವನ್ನು ಅಳವಡಿಸಬೇಕೆಂದು ಪರಿಶೀಲಿಸುವುದುಂಟು. ಆದರೆ ಬ್ಯಾಂಕಿಂಗ್ ವಲಯದ ಪ್ರತಿನಿಧಿಗಳೊಂದಿಗಾಗಲಿ, ಸರ್ಕಾರಿ ವಲಯದ ಇತರ ಉದ್ಯಮಗಳ ಪ್ರತಿನಿಧಿಗಳೊಂದಿಗಾಗಲಿ ಆ ರೀತಿಯ ಸಂವಾದ ನಡಸುವ ವಾಡಿಕೆಯಿಲ್ಲ. ಕೋಳಿಯನ್ನು ಕೇಳಿ ಮೆಣಸು ಅರೆಯುತ್ತಾರೆಯೆ ? ವಿತ್ತ ಮಂತ್ರಿಗಳು ಹಣ ವಲಯಕ್ಕೆ ಸಂಬಂಧಿಸಿದಂತೆ ತಮ್ಮ ಮುಂಗಡ ಪತ್ರದಲ್ಲಿ ನೀಡಿದ ಸೂಚನೆಗಳನ್ನು ಜಾರಿಗೆ ತರಲು ತೊಡಗುವುದಷ್ಟೇ ಬ್ಯಾಂಕುಗಳ ಕೆಲಸ. ಹಿಂದೆ ಹೇಳಿದ ಹಾಗೆ, ಆ ಬಗ್ಗೆ ಏನು ಕ್ರಮ ತೆಗೆದುಕೊಳ್ಳಬೇಕೆಂಬುದನ್ನು ಕುರಿತಂತೆ ರಿಸರ್ವ್ ಬ್ಯಾಂಕ್ ಆದೇಶ ನೀಡುತ್ತದೆ. ಅದನ್ನನುಸರಿಸುವುದಷ್ಟೇ ಬ್ಯಾಂಕುಗಳ ಕೆಲಸ.

ರಿಸರ್ವ್ ಬ್ಯಾಂಕು ನಮ್ಮ ದೇಶದ ಕೇಂದ್ರ ಬ್ಯಾಂಕು, ಬ್ಯಾಂಕುಗಳ ಬ್ಯಾಂಕು. ಅರ್ಥವ್ಯವಸ್ಥೆಯ ಧಮನಿಗಳು ಆರೋಗ್ಯಕರವಾಗಿರುವಂತೆ ನೋಡಿಕೊಳ್ಳುವ ಹೊಣೆ ರಿಸರ್ವ್ ಬ್ಯಾಂಕಿನದು. ಈ ದೃಷ್ಟಿಯಿಂದ ಅದು ನೀಡುವ ಸೂಚನೆಗಳನ್ನು ಪಾಲಿಸಬೇಕಾದ್ದು ಬ್ಯಾಂಕುಗಳ ಕರ್ತವ್ಯ. ಆದರೆ ಸದಾ ಚಂಚಲವಾದ, ತಳಮಳಿಸುವ ಅರ್ಥವ್ಯವಸ್ಥೆಯ ನಾನಾ ಪ್ರವೃತ್ತಿಗಳ ಬಗ್ಗೆ ಸಂಬಂಧಪಟ್ಟ ಎಲ್ಲ ವಲಯಗಳೊಂದಿಗೂ ಸಮಾಲೋಚನೆಗೆ ಅವಕಾಶವಿದ್ದರೆ, ಸರ್ಕಾರದ ಆದೇಶದಂತೆ ನೀತಿಗಳನ್ನು ರೂಪಿಸುವುದಷ್ಟೇ ರಿಸರ್ವ್ ಬ್ಯಾಂಕಿನ ಹೊಣೆಯಾಗದಿದ್ದರೆ, ಇಡೀ ಪ್ರಕ್ರಿಯೆ ಜನತಂತ್ರಾತ್ಮವಾದ್ದಾದರೆ, ನೀತಿರೂಪಣೆಯಲ್ಲಿ ಬ್ಯಾಂಕುಗಳನ್ನು ವಿಶ್ವಾಸಕ್ಕೆ ತೆಗೆದುಕೊಂಡರೆ, ಅದರಿಂದ ಸಮಸ್ಯೆಗಳ ಪರಿಹಾರ ಎಷ್ಟೋ ಸುಲಭವಾಗಬಹುದು.

ಹೊಸ ಸರ್ಕಾರದ ಹಣಕಾಸು ಮಂತ್ರಿಗಳು ಈ ವರ್ಷದ ಆಯ-ವ್ಯಯ ಪತ್ರ ಮಂಡಿಸುವಾಗ ನಮ್ಮ ಬ್ಯಾಂಕ್ ವ್ಯವಸ್ಥಾಪಕರ ಬಗ್ಗೆ ಒಳ್ಳೆಯ ಮಾತುಗಳನ್ನಾಡಿದ್ದಾರೆ. ಒಟ್ಟಿನಲ್ಲಿ ಅವರು ಅತ್ಯಂತ ಅರ್ಹತೆಯುಳ್ಳವರು, ಅರ್ಪಣಭಾವದಿಂದ ಕೂಡಿದವರು, ಕಷ್ಟಪಟ್ಟು ದುಡಿಯುವವರು – ಎಂದು ಪ್ರಶಂಸಿಸಿದ್ದಾರೆ. ಬ್ಯಾಂಕಿಂಗ್ ಸೇವೆಯ ಬಗ್ಗೆ ಸಾರ್ವಜನಿಕರಲ್ಲಿ ಅಷ್ಟೇನೂ ತೃಪ್ತಿಯಿಲ್ಲ ಎಂದೂ ಅದೇ ಉಸಿರಿನಲ್ಲಿ ಹೇಳಿದ್ದಾರೆ. ವರ್ಷಗಳು

ಉರುಳಿದಂತೆ ಕೆಲವು ಸಂರಚನಾತ್ಮಕ ಗಡಸುತನಗಳು ಬೆಳೆದುಕೊಂಡಿವೆಯೆಂದಿದ್ದಾರೆ. ಬ್ಯಾಂಕಿಂಗ್ ಕ್ಷೇತ್ರದಲ್ಲಿ ಹೆಚ್ಚಿನ ಸ್ಪರ್ಧೆಯು ಅಗತ್ಯವಿದೆ. ಬ್ಯಾಂಕಿಂಗ್ ಸೇವೆಯ ವಿಚಾರದಲ್ಲಿ ಹೆಚ್ಚಿನ ನಮ್ಯತೆ ಬೆಳೆಯಬೇಕಾಗಿದೆ ಎಂದು ಹೇಳಿದ್ದಾರೆ. ಸಾರ್ವಜನಿಕರ ಅಗತ್ಯಕ್ಕೆ ನಮ್ಮ ಬ್ಯಾಂಕಿಂಗ್ ಸಂಸ್ಕೃತಿ ಹೆಚ್ಚು ಸ್ಪಂದಿಸಬೇಕಾಗಿದೆಯೆನ್ನುವುದು ಅವರ ಅನಿಸಿಕೆ. ಈ ಅಂಶಗಳನ್ನು ಪರಿಶೀಲಿಸಿ ಸರ್ಕಾರಕ್ಕೆ ಶಿಫಾರಸುಗಳನ್ನು ನೀಡಲು ಬ್ಯಾಂಕರುಗಳ, ಬ್ಯಾಂಕ್ ಉದ್ಯೋಗಿಗಳ, ಠೇವಣಿದಾರರ ಮತ್ತು ಸಾಲಗಾರರ ಸಮಿತಿಯೊಂದನ್ನು ರಚಿಸಬೇಕೆಂದು ರಿಸರ್ವ್ ಬ್ಯಾಂಕನ್ನು ಕೋರುವುದಾಗಿ ಹೇಳಿದ್ದಾರೆ. ಇಂಥ ಸಮಿತಿಯ ಕಾರ್ಯಸ್ವರೂಪ ಹೇಗಿರುವುದೆಂಬುದನ್ನೂ ಅದರ ಮುಂದೆ ಇಡಲಾಗುವ ಉದ್ದೇಶಗಳು ಏನೆಂಬುದನ್ನೂ ಕಾದು ನೋಡಬೇಕಾಗಿದೆ. ನಮ್ಮ ಇಡೀ ಬ್ಯಾಂಕಿಂಗ್ ವ್ಯವಸ್ಥೆಯನ್ನೇ ಪುನರ್ರಚಿಸುವ ಬಗ್ಗೆ ತೀವ್ರವಾಗಿ ಚಿಂತಿಸಬೇಕಾದ ಕಾಲವೀಗ ಬಂದಿದೆ. ಇವೆಲ್ಲ ಸಮಸ್ಯೆಗಳ ಬಗ್ಗೆ ನಮ್ಮ ಬ್ಯಾಂಕಿಂಗ್ ಧುರೀಣರೊಂದಿಗೂ ಇತರ ತಜ್ಞರೊಂದಿಗೂ ಸರ್ಕಾರ ಸಮಾಲೋಚಿಸುವುದು ಅಗತ್ಯವಾಗಿದೆ.

## ಸ್ವಾಯತ್ತತೆ

ಇದೇ ಸಂದರ್ಭದಲ್ಲಿ ಹಣಕಾಸು ಮಂತ್ರಿಗಳು ಆಡಿರುವ ಇನ್ನೊಂದು ಮಾತೂ ಗಮನಾರ್ಹ. ದೇಶದ ಹಣಕಾಸು ಸಂಸ್ಥೆಗಳ ಕಾರ್ಯಭಾರದಲ್ಲಿ ಅವಕ್ಕೆ ಸ್ವಾಯತ್ತತೆ ನೀಡಬೇಕು ಎಂಬುದಾಗಿಯೂ ಅವರು ಹೇಳಿದ್ದಾರೆ. ಈ ಹಣಕಾಸು ಸಂಸ್ಥೆಗಳಲ್ಲಿ ಬ್ಯಾಂಕುಗಳೂ ಸೇರಿವೆಯೇ ಎಂಬುದು ಸ್ಪಷ್ಟವಿಲ್ಲ. ಹಿಂದೆ ಹೇಳಿದ ಹಾಗೆ, ನಮ್ಮ ಬ್ಯಾಂಕುಗಳ ಕಾರ್ಯನಿರ್ವಹಣೆಯಲ್ಲಿ ಅವಕ್ಕೆ ಹೆಚ್ಚಿನ ವಿವೇಚನಾಸ್ವಾತಂತ್ರ್ಯ ಅಗತ್ಯವಾಗಿದೆ. ಸರ್ಕಾರ ಹಾಗೂ ರಿಸರ್ವ್ ಬ್ಯಾಂಕು ನೀಡುವ ಅನೇಕ ನಿರ್ದೇಶನಗಳಿಗೆ ಅನುಗುಣವಾಗಿ ಅವೀಗ ಕಾರ್ಯನಿರ್ವಹಿಸಬೇಕಾಗಿದೆ. ಒಂದು ಕಡೆ ಸೇವಾಕ್ಷೇತ್ರ ಅಭಿಗಮನದಂಥ ಅತ್ಯಂತ ಹೊಣೆಗಾರಿಕೆಯ ಕರ್ತವ್ಯವನ್ನು ಅವುಗಳ ಮೇಲೆ ಹೊರಿಸಲಾಗಿದೆ. ಇನ್ನೊಂದು ಕಡೆ ಅಸಂಖ್ಯಾತ ಕಟ್ಟುಕಟ್ಟಳೆಗಳೂ ರಾಜಕಾರಣಿಗಳ ಹಸ್ತಕ್ಷೇಪಗಳೂ ಅವನ್ನು ನಿರ್ವೀರ್ಯಗೊಳಿಸುತ್ತಿವೆ. ವ್ಯಾಪಕ ಸಮಾಲೋಚನೆಯ ಅನಂತರ ರೂಪಿಸಲಾದ ರೂಪರೇಷೆಗಳ ಒಳಗೆ ವಿವೇಚನಾಯುತವಾಗಿ ಕಾರ್ಯ ನಿರ್ವಹಿಸಲು ಬ್ಯಾಂಕುಗಳಿಗೆ ಸ್ವಾತಂತ್ರ್ಯ ಇರಬೇಕಾಗಿದೆ. ಬ್ಯಾಂಕುಗಳು ಇಂದು ಎದುರಿಸಬೇಕಾದ ಸ್ಪರ್ಧೆ ಅಗಾಧ. ಹೆಚ್ಚು ಸಂಪನ್ಮೂಲಗಳನ್ನು ಕ್ರೋಡೀಕರಿಸುವುದು ಅವಕ್ಕೀಗ ಕಷ್ಟವಾಗುತ್ತಿದೆ. ಠೇವಣಿದಾರರಲ್ಲಿ ಅರಿವು ಹೆಚ್ಚುತ್ತಿದೆ. ಅವರ ಆವಶ್ಯಕತೆಗಳೂ ಬಹುಮುಖವಾಗುತ್ತಿವೆ. ಅವನ್ನು ಪೂರೈಸುವಂಥ ಹೊಸ ಹೊಸ ಯೋಜನೆಗಳನ್ನು ರೂಪಿಸಲು ಬ್ಯಾಂಕುಗಳಿಗೆ ಅವಕಾಶ ಇರಬೇಕು. ನಗದು ಮೀಸಲು ಅನುಪಾತ, ಪರಿನಿಯುತ ದ್ರವತ್ವ ಅನುಪಾತ, ಭಿನ್ನಕ ಬಡ್ಡಿದರ, ಆದ್ಯತಾವಲಯ, ಸಾಲ ನೀಡಿಕೆಯ ನೀತಿ ನಿಯಮಗಳು ಮುಂತಾದ ನಾನಾ ಕಟ್ಟುಪಾಡುಗಳ ನಡುವೆ ಅವು ಕಾರ್ಯ ನಡಸಬೇಕಾಗಿದೆ. ಬ್ಯಾಂಕುಗಳು ಅಸಂಖ್ಯಾತ ಠೇವಣಿದಾರರಿಂದ ಹಣ ಸಂಗ್ರಹಿಸುತ್ತವೆಂಬುದನ್ನೂ, ಅವು ಒಂದು ರೀತಿಯಲ್ಲಿ ಸಾರ್ವಜನಿಕ ಹಣದ ನ್ಯಾಸಧಾರಿಗಳೆಂಬ ಅಂಶವನ್ನೂ ಕಡೆಗಣಿಸಲಾಗಿದೆ. ಇದೆಲ್ಲವೂ ಸರ್ಕಾರದ ಹಣ ಎಂಬ ಧೋರಣೆಯಿದೆ. ಪರಿಚಾಲನೆಯ ವೆಚ್ಚ, ಹೆಚ್ಚುತ್ತಿರುವ ಬಾಕಿ, ಬ್ಯಾಂಕಿಗೆ ಲಾಭ ತರದ (ನಾನ್-ಪರ್ಫಾರ್ಮಿಂಗ್) ಆಸ್ತಿಗಳ ರಾಶಿ—ಇವೆಲ್ಲ ಬ್ಯಾಂಕಿನ ಭಾರವನ್ನು ಹೆಚ್ಚಿಸುತ್ತಿವೆ; ಅವುಗಳ ದಕ್ಷತೆ–ಲಾಭಪ್ರದತೆಗಳನ್ನು ಕುಗ್ಗಿಸುತ್ತಿವೆ. ಇವನ್ನೆಲ್ಲ ಕುರಿತು ಚಿಂತಿಸಬೇಕಾಗಿದೆ.

ಹೀಗೆಂದರೆ ಸಮಾಜಕ್ಕೆ ಬ್ಯಾಂಕುಗಳ ಹೊಣೆಯೇನೂ ಇಲ್ಲ ಎಂದು ಹೇಳಿದಂತಲ್ಲ. ಆದರೆ ಇದನ್ನು ಇನ್ನೂ ದಕ್ಷವಾಗಿ, ಇನ್ನೂ ವ್ಯಾಪಕವಾಗಿ, ನಿರ್ವಹಿಸುವ ಹಾದಿಯನ್ನು ನಾವು ಅನ್ವೇಷಿಸಬೇಕಾಗಿದೆ. ಬ್ಯಾಂಕುಗಳಿಗೆ ಸ್ವಲ್ಪಮಟ್ಟಿನ ಸ್ವಾಯತ್ತತೆಯನ್ನು ನೀಡುವುದರಿಂದ ಹಾಗೂ ನಿರ್ಭೀತವಾದ ಮುಕ್ತವಾತಾವರಣವನ್ನು ಸೃಷ್ಟಿಸುವುದರಿಂದ, ಸಮಾಲೋಚನೆಯ ಮೂಲಕ ತೀರ್ಮಾನಗಳನ್ನು ತೆಗೆದುಕೊಳ್ಳುವುದರಿಂದ ಬ್ಯಾಂಕುಗಳು ಸ್ವಾಮಿಕಾರ್ಯ-ಸ್ವಕಾರ್ಯಗಳೆರಡನ್ನೂ ನಿರ್ವಹಿಸಬಲ್ಲುವು. ಸಮಾಜದ ಋಣವನ್ನು ಇನ್ನೂ ಚೆನ್ನಾಗಿ ತೀರಿಸಬಲ್ಲುವು.

## ರೈತ ಋಣ

ಹಣಕಾಸು ಮಂತ್ರಿಗಳು ತಮ್ಮ ಆಯವ್ಯಯ ಭಾಷಣದಲ್ಲಿ ಬ್ಯಾಂಕುಗಳಿಗೆ ಸಂಬಂಧಿಸಿದಂತೆ ಇನ್ನೂ ಅನೇಕ ವಿಚಾರಗಳನ್ನು ಪ್ರಸ್ತಾಪಿಸಿದ್ದಾರೆ. ರೂ. 10,000ದ ವರೆಗೆ ರೈತರ ಋಣಗಳನ್ನು ಮನ್ನಾ ಮಾಡುವುದು ಒಂದು ವಿಚಾರ. ಇದು ಮುಖ್ಯವಾಗಿ ಒಂದು ರಾಜಕೀಯ ತೀರ್ಮಾನವೆಂಬುದು ನಿಜ. ಸರ್ಕಾರವೇ ಈ ಹಣವನ್ನು ತುಂಬಿಕೊಡುತ್ತದೆ. ಆದರೆ ಬ್ಯಾಂಕುಗಳಿಗೆ ಸಂಬಂಧಿಸಿದಂತೆ ಕೆಲವು ಮುಖ್ಯಾಂಶಗಳನ್ನು ವಿವೇಚಿಸಬೇಕಾಗಿದೆ. ಸದಾ ಕಾಲಕ್ಕೂ ಇಂಥ ಸಾಲಗಳನ್ನು ಮನ್ನಾ ಮಾಡಲಾಗುವುದಿಲ್ಲ ಎಂಬುದು ಮನವರಿಕೆಯಾಗಬೇಕು. ಬ್ಯಾಂಕುಗಳ ವಿಶ್ವಾಸಾರ್ಹತೆಗೆ ಭಂಗ ಉಂಟಾಗಬಾರದು. ಉದ್ದೇಶಪೂರ್ವಕವಾಗಿ ಕಟಬಾಕಿದಾರರಾದವರಿಗೆ ಈ ಸೌಲಭ್ಯವಿಲ್ಲವೆಂಬುದೇನೋ ನಿಜ. ಆದರೆ ಇದನ್ನು ಗುರುತಿಸಲು ಅನುಸರಿಸಬೇಕಾದ ಮಾನದಂಡ ಯಾವುದಿದೆ ? ಈ ವಿಚಾರದಲ್ಲಿ ಬ್ಯಾಂಕುಗಳ ಹೊಣೆ ಅಗಾಧವಾಗುತ್ತದೆ. ಈ ಅಗ್ನಿಪರೀಕ್ಷೆಯಲ್ಲಿ ಅವು ಗೆದ್ದು ಹೊರಬರಬೇಕಾಗಿದೆ. ಇನ್ನುಮುಂದೆ ನೀಡಲಾಗುವ ಸಾಲದ ಬಗ್ಗೆ ನೂರು ಸಾರಿ ಯೋಚಿಸಬೇಕಾಗುತ್ತದೆ. ಇಡೀ ವ್ಯವಹಾರವನ್ನು ಕುರಿತಂತೆ ವೈಜ್ಞಾನಿಕ ಮಾನದಂಡಗಳನ್ನು ರೂಪಿಸುವ ಸಲುವಾಗಿ ಎಲ್ಲ ಬ್ಯಾಂಕುಗಳ ನಡುವೆ ಸಮಾಲೋಚನೆ ಅಗತ್ಯವಾಗಬಹುದು. ಈ ಎಲ್ಲ ಕಾರ್ಯ ನಿರ್ವಹಿಸಲು ಎಲ್ಲ ದೃಷ್ಟಿಗಳಿಂದಲೂ ತಜ್ಞರೂ ನಿಷ್ಣಾತರೂ ಆದವರ ಸಿಬ್ಬಂದಿಯನ್ನು ರೂಪಿಸುವ ಪ್ರಶ್ನೆ ಪ್ರಮುಖವಾದದ್ದು.

## ಉದ್ಯೋಗಾನುಸ್ಥಾಪಿತ ಅಭಿವೃದ್ಧಿ

ದಾರಿದ್ರ್ಯನಿವಾರಣೆಗೆ ಹಣಕಾಸು ಮಂತ್ರಿಗಳು ಹೆಚ್ಚಿನ ಪ್ರಾಮುಖ್ಯ ನೀಡಿರುವುದು ಸರಿಯೇ. ಉತ್ಪಾದನೆ ಹೆಚ್ಚಿದರೆ, ಹೆಚ್ಚಿನ ಸಂಪತ್ತು ಉತ್ಪಾದಿತವಾದರೆ ಅದರ ಫಲ ಕೆಳಗಿನ ವರೆಗೂ ತೊಟ್ಟಿಕ್ಕುತ್ತದೆ—ಎಂಬ ಸೂತ್ರಕ್ಕೆ ಅವರು ವಿದಾಯ ಹೇಳಿದ್ದಾರೆ. ಉದ್ಯೋಗಾನುಸ್ಥಾಪಿತ ಗ್ರಾಮೀಣಾಭಿವೃದ್ಧಿ ಯೋಜನೆಗಳಿಗೆ ಇನ್ನು ಮುಂದೆ ಹೆಚ್ಚಿನ ಪ್ರಾಶಸ್ತ್ಯ ದೊರಕುತ್ತದೆ. ಈ ದೃಷ್ಟಿಯಿಂದ ಸೇವಾಕ್ಷೇತ್ರ ಅಭಿಗಮನ ಇನ್ನೂ ಸಮರ್ಪಕವಾಗಬೇಕಾಗಿದೆ. ಹೊಸ ಕಾರ್ಯಕ್ರಮಗಳ ಅನ್ವೇಷಣೆ ಅನಿವಾರ್ಯ. ಗ್ರಾಮಮಟ್ಟದ ಉದರಿ ಯೋಜನೆಗಳನ್ನು ರೂಪಿಸಿ, ಅಗತ್ಯವಿರುವವರಿಗೆ ಉದರಿ ದೊರಕುವಂತೆ ಮಾಡಬೇಕು. ತರಬೇತಿ ಕಾರ್ಯಗಳನ್ನು ಹಮ್ಮಿಕೊಳ್ಳಬೇಕು. ಈ ಎಲ್ಲ ವಿಚಾರಗಳಲ್ಲಿ ಬ್ಯಾಂಕುಗಳ ಪಾತ್ರವನ್ನು ಕಡಿಮೆ ಮಾಡುವಂತಿಲ್ಲ. ಗ್ರಾಮೀಣ ಪ್ರದೇಶಗಳಲ್ಲಿ ಬ್ಯಾಂಕುಗಳು ಇದುವರೆಗೆ ನಿರ್ವಹಿಸಿರುವ ಪಾತ್ರವನ್ನು ಖುಸ್ರೋ ಸಮಿತಿ ಪ್ರಶಂಸಿಸಿದೆ. ಉದರಿ ಬಟವಾಡೆ (ಕ್ರೆಡಿಟ್ ಡೆಲಿವರಿ) ವ್ಯವಸ್ಥೆಯನ್ನು ಇನ್ನಷ್ಟು ಸುದೃಢಗೊಳಿಸಲು ಅದು ಅನೇಕ ಶಿಫಾರಸುಗಳನ್ನು ಮಾಡಿದೆ.

## ಸವಲತ್ತುಗಳ ವಿಸ್ತರಣೆ

ಅನೇಕ ಹಣಕಾಸು ಸಂಸ್ಥೆಗಳ ಮಧ್ಯಪ್ರವೇಶದಿಂದಾಗಿ, ಉಳಿತಾಯದಾರರ ವಿಭಿನ್ನ ಆವಶ್ಯಕತೆಗಳನ್ನು ಪೂರೈಸುವ ಹೊಸ ಹೊಸ ಯೋಜನೆಗಳನ್ನು ಅವು ರೂಪಿಸುತ್ತಿರುವುದರಿಂದಾಗಿ, ಸರ್ಕಾರವೂ ಉದ್ಯಮ ಸಂಸ್ಥೆಗಳೂ ನೇರವಾಗಿ ಉಳಿತಾಯಗಳನ್ನು ಸಂಗ್ರಹಿಸುವ ಆಕರ್ಷಕ ವಿಧಾನಗಳನ್ನು ಹಮ್ಮಿಕೊಂಡಿರುವುದರಿಂದಾಗಿ, ಉದ್ಯಮ ಸಂಸ್ಥೆಗಳು ತಮಗೆ ಬೇಕಾದ ದುಡಿಯುವ ಬಂಡವಾಳಕ್ಕೆ ಬ್ಯಾಂಕುಗಳ ಕೈಕಾಯುವ ಪರಿಪಾಟ ತಗ್ಗುತ್ತಿರುವುದರಿಂದಾಗಿ ಬ್ಯಾಂಕುಗಳ ಮಧ್ಯಸ್ಥಗಾರಿಕೆ ಪಾತ್ರಕ್ಕೆ ಈಚಿನ ವರ್ಷಗಳಲ್ಲಿ ಚ್ಯುತಿ ಉಂಟಾಗಿರುವುದು ಎಲ್ಲರಿಗೂ ತಿಳಿದಿರುವ ಸಂಗತಿ. ಬ್ಯಾಂಕುಗಳ ಠೇವಣಿ ಹರಿವು ಅಷ್ಟೇನೂ ಕುಗ್ಗಿಲ್ಲವಾದರೂ, ಇತರ ಸಂಸ್ಥೆಗಳಿಗೆ ಸರ್ಕಾರ ನೀಡಿರುವ ಕೆಲವು ಸವಲತ್ತುಗಳನ್ನು ಬ್ಯಾಂಕುಗಳಿಗೆ ನೀಡಿಲ್ಲದಿರುವುದರಿಂದ ಕ್ರಮೇಣ

ಬ್ಯಾಂಕುಗಳ ಈ ಕಲಾಪಕ್ಕೆ ಧಕ್ಕೆ ಉಂಟಾಗುವ ಅಪಾಯ ಇಲ್ಲದಿಲ್ಲ. ಠೇವಣಿ–ಉದರಿ ಅನುಪಾತವೂ ಸಮರ್ಪಕವಾಗಿಲ್ಲವೆಂಬುದನ್ನು ಹಣಕಾಸುಮಂತ್ರಿಗಳೇ ತಮ್ಮ ಆಯ–ವ್ಯಯ ಭಾಷಣದಲ್ಲಿ ಪ್ರಸ್ತಾಪಿಸಿದ್ದಾರೆ. ಉತ್ಪಾದಕ ಕ್ಷೇತ್ರಗಳಲ್ಲಿ ಬ್ಯಾಂಕ್ ಉದರಿ ಹರಿಯುವ ಅಗತ್ಯವಂತೂ ಇದ್ದೇ ಇದೆ. ಇತರ ಸಂಸ್ಥೆಗಳಲ್ಲಿ ಹಣ ತೊಡಗಿಸುವ ಉಳಿತಾಯದಾರರಿಗೆ ಸರ್ಕಾರ ನೀಡಿರುವ ಕೆಲವು ಸವಲತ್ತುಗಳನ್ನು ಬ್ಯಾಂಕುಗಳಿಗೂ ವಿಸ್ತರಿಸಬೇಕೆಂದು ಅವು ಒತ್ತಾಯಿಸುವುದು ಅಗತ್ಯ.

ಉದಾಹರಣೆಗೆ ರಾಷ್ಟ್ರೀಯ ಉಳಿತಾಯ ಪತ್ರವೇ ಮುಂತಾದವುಗಳಲ್ಲಿ ತೊಡಗಿಸಲಾದ ಹಣವನ್ನು ವರಮಾನ ತೆರಿಗೆಯಿಂದ ಮನ್ನಾ ಮಾಡಲು ಅವಕಾಶವಿದೆ. ಈ ಉಪಬಂಧವನ್ನು ಬ್ಯಾಂಕುಗಳಲ್ಲಿ ಇರಿಸಿದ ಠೇವಣಿಗಳಿಗೂ ನಿಶ್ಚಿತಮಿತಿಯ ಒಳಗೆ ಅನ್ವಯಿಸಬೇಕೆಂದು ಕೋರಬಹುದಾಗಿದೆ. ಬಂಡವಾಳ ಗಳಿಕೆ ತೆರಿಗೆಯಿಂದಲೂ ವಿನಾಯಿತಿ ದೊರಕಿಸಿಕೊಡಬಹುದಾಗಿದೆ. ಬ್ಯಾಂಕ್ ಠೇವಣಿಯೇ ಮುಂತಾದವುಗಳ ಮೇಲೆ ಗಳಿಸಿದ ಬಡ್ಡಿಗೆ ಒಂದು ಗೊತ್ತಾದ ಮಿತಿಯ ವರೆಗೆ (ರೂ. 7,000) ವರಮಾನ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ. ಆದರೆ ಯೂನಿಟ್ ಟ್ರಸ್ಟ್‌ನಿಂದ ಬಂದ ಗಳಿಕೆಯ ವಿಚಾರದಲ್ಲಿ ಇನ್ನೂ ರೂ.3,000ದ ವರೆಗೆ ವಿನಾಯಿತಿಯುಂಟು. ಬ್ಯಾಂಕ್ ಠೇವಣಿಗಳಿಗೂ ಇಂಥ ಹೆಚ್ಚಿನ ವಿನಾಯಿತಿಯನ್ನು ಏಕೆ ವಿಸ್ತರಿಸಬಾರದು ಎಂಬ ಪ್ರಶ್ನೆ ಉದ್ಭವಿಸುತ್ತದೆ. ಬ್ಯಾಂಕ್ ಠೇವಣಿಗಳೂ ದೇಶದ ಅಭಿವೃದ್ಧಿಕಾರ್ಯಗಳಿಗಾಗಿ ವಿನಿಯೋಜಿತವಾಗುವುದರಿಂದ, ಸರ್ಕಾರವೂ ರಿಸರ್ವ್ ಬ್ಯಾಂಕೂ ಆಗಿಂದಾಗ್ಗೆ ವಿಧಿಸುವ ನಾನಾ ನೀತಿ ಸೂತ್ರಗಳಿಗೆ ಅನುಗುಣವಾಗಿಯೇ ಈ ಹಣದ ವಿನಿಯೋಜನೆಯಾಗುತ್ತಿರುವುದರಿಂದ ಇತರ ಸಂಸ್ಥೆಗಳಲ್ಲಿ ಉಳಿತಾಯ ಮಾಡುವವರಿಗೆ ಲಭಿಸುವ ಸವಲತ್ತುಗಳೆಲ್ಲ ಬ್ಯಾಂಕ್ ಠೇವಣಿದಾರರಿಗೂ ದೊರಕಬೇಕೆಂದು ವಾದಿಸುವುದು ನ್ಯಾಯಸಮ್ಮತ. ರಾಷ್ಟ್ರೀಕೃತ ಮತ್ತು ಇತರ ಬ್ಯಾಂಕುಗಳು ಇಂದು ಕೇವಲ ವಾಣಿಜ್ಯ ಬ್ಯಾಂಕುಗಳಲ್ಲ. ವಾಣಿಜ್ಯ ತತ್ವಗಳ ಆಧಾರದ ಮೇಲೆ ಕಾರ್ಯ ನಿರ್ವಹಿಸುತ್ತಿದ್ದರೂ ಅವುಗಳ ಸಾಮಾಜಿಕ ಮುಖ ಅಗಾಧವಾಗಿ ಬೆಳೆಯುತ್ತಿದೆ. ಎರಡು ದೋಣಿಗಳ ಮೇಲೆ ಏಕಕಾಲದಲ್ಲಿ ಕಾಲಿಟ್ಟು ಸಾಗಲು ಯತ್ನಿಸುತ್ತಿರುವ ಭಾರತೀಯ ಬ್ಯಾಂಕುಗಳು ವಿವಿಧ ಉದ್ದೇಶಗಳ ಪರಂಪರಾಗತ ಸಾಮರಸ್ಯ ಸಾಧನೆಯ ಜೊತೆಗೆ, ಇನ್ನೊಂದು ಆಯಾಮದಲ್ಲಿ ಈ ಹೊಸ ಬಗೆಯ ಸಾಮರಸ್ಯವನ್ನೂ ಸಾಧಿಸಬೇಕಾಗಿದೆ. ಇದಕ್ಕೆ ತಕ್ಕಂತೆ ಬ್ಯಾಂಕುಗಳು ಹೊಸ ಬಗೆಯ, ವಿಶಿಷ್ಟವಾದ, ಸ್ವರೂಪವನ್ನು ಬೆಳೆಸಿಕೊಳ್ಳುವಂತೆ ನೋಡಿಕೊಳ್ಳಬೇಕಾದ್ದು ಸರ್ಕಾರದ ಕರ್ತವ್ಯ. ●

---

# 'ಬ್ಯಾಂಕಿಂಗ್ ಪ್ರಪಂಚ'ದ ಆಜೀವ ಚಂದಾದಾರರ ಪಟ್ಟಿ

(ಡಿಸೆಂಬರ್ ೧೯೮೯ರ ಸಂಚಿಕೆಯಿಂದ ಮುಂದುವರಿದದ್ದು)

**ಶ್ರೀ/ಶ್ರೀಮತಿ**

೮೧೭ ಅಮರೇಶ ಬನ್ನಟ್ಟಿ
೮೧೮ ಸಾ. ಜ. ರಮೇಶ್
೮೧೯ ಜೆ. ಹೀರಾಲಾಲ್
೮೨೦ ಜಿ. ನಾಗರಾಜ
೮೨೧ ಎಸ್. ಟಿ. ಶಾಂತಗಂಗಾಧರ್
೮೨೨ ಸಿ. ಗೋವಿಂದಾಚಾರ್
೭೨೩ ಉದಯಕುಮಾರ್
೮೨೪ ಗಣಪತಿ ವಿ. ಹೆಗ್ಡೆ
೮೨೫ ಕಬ್ಬಿನಾಲೆ ವಸಂತ ಭಾರದ್ವಾಜ್
೮೨೬ ಸಿಂಧುವಳ್ಳಿ ಬಾಲಸುಬ್ರಹ್ಮಣ್ಯಂ
೮೨೭ ಕ್ಯಾ. ಪಿ. ಎಸ್. ಮಳೀಮಠ್
೮೨೮ ಎಸ್. ಬಾಲಸುಬ್ರಹ್ಮಣ್ಯ
೮೨೯ ಸುಧಾಕರ ಬೇಕಲ್
೮೩೦ ಡಿ. ಎಸ್. ನಾಗೇಶ್
೮೩೧ ಕೆ. ಎಸ್. ಅನಂತ ಉಪಾಧ್ಯಾಯ
೮೩೨ ಜಯಶಂಕರ ನಾಯಕ್
೮೩೩ ಮನೋಹರ ಎಂ. ಗೋಖಲೆ
೮೩೪ ಎನ್. ಎರಿ. ಕೃಷ್ಣಮೂರ್ತಿ
೮೩೫ ಎಂ. ಎಸ್. ಶಿವಕುಮಾರ ಸ್ವಾಮಿ
೮೩೬ ಹೇಮಚಂದ್ರ
೮೩೭ ಶ್ರೀನಿವಾಸ ಗಟ್ಟಿ
೮೩೮ ಕುಪ್ಪಣ್ಣ
೮೩೯ ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್
ಮುಖ್ಯ ಶಾಖೆ
ರಾಯಚೂರು–584 101
೮೪೦ ದಿ ಅರ್ಬನ್ ಕೋ–ಆಪರೇಟಿವ್
ಬ್ಯಾಂಕ್ ಲಿ., ಕೊಪ್ಪಳ

**ಭಾರತೀಯ ಸ್ಟೇಟ್ ಬ್ಯಾಂಕ್**

೮೪೧ ಕುವೆಂಪು ನಗರ ಶಾಖೆ
(ಮೈಸೂರು–570 023)
೮೪೨ ಸೈನಿಕಶಾಲೆ ಶಾಖೆ
(ಬಿಜಾಪುರ–586 102)
೮೪೩ ಸಗರ
೮೪೪ ಕೃಷಿ ಅಭಿವೃದ್ಧಿ ಶಾಖೆ
ಗೋಕಾಕ–591 307
೮೪೫ ಮಣ್ಣೂರು

**ಸ್ಟೇಟ್ ಬ್ಯಾಂಕ್ ಆಫ್ ಮೈಸೂರು**

೮೪೬ ವೈಯಾಳಿಕಾವಲ್ ಶಾಖೆ
(ಬೆಂಗಳೂರು–560 003)
೮೪೭ ಬುಕ್ಕಾಪಟ್ಟಣ
೮೪೮ ಬಳ್ಳಾರಿ ಜಿಲ್ಲಾ ಕೇಂದ್ರ ಸಹಕಾರಿ
ಬ್ಯಾಂಕ್, ಲಿಮಿಟೆಟ್, ಪ್ರಧಾನ ಕಛೇರಿ
ಹೊಸಪೇಟೆ–583 201
೮೪೯ ಕರ್ನಾಟಕ ಸೆಂಟ್ರಲ್ ಕೋ–ಆಪರೇಟಿವ್
ಬ್ಯಾಂಕ್ ಲಿಮಿಟೆಡ್, ಪ್ರಧಾನ ಕಛೇರಿ
ಧಾರವಾಡ–580 001
೮೫೦ ಆಚಾರ್ಯ ಪಾಠಶಾಲೆ
ವಾಣಿಜ್ಯ ಕಾಲೇಜು, ಬೆಂಗಳೂರು
೮೫೧ ಅಕ್ಕಮಹಾದೇವಿ ಮಹಾವಿದ್ಯಾಲಯ
ಬೀದರ–585 401
೮೫೨ ಪ್ರಧಾನ ಕಾರ್ಯದರ್ಶಿಯವರ ಕಛೇರಿ
ಸ್ಟೇಟ್ ಬ್ಯಾಂಕ್ ನೌಕರರ ಸಂಘ
ಬೆಂಗಳೂರು–560 001
೮೫೩ ಉಪ ಪ್ರಧಾನ ಕಾರ್ಯದರ್ಶಿಯವರ ಕಛೇರಿ
ಸ್ಟೇಟ್ ಬ್ಯಾಂಕ್ ನೌಕರರ ಸಂಘ
ವಲಯ ಕಛೇರಿ, ಹುಬ್ಬಳ್ಳಿ–580 020
೮೫೪ ಭಗವಾನ್ ಬುದ್ಧ ಕಲಾ ಮತ್ತು ವಿಜ್ಞಾನ
ಪ್ರಥಮ ದರ್ಜೆ ಕಾಲೇಜು, ಬೆಂಗಳೂರು

# ಬ್ಯಾಂಕಿಂಗ್: ಹೊಸ ಅಲೆ

**ಠೇವಣಿ ಸಂಗ್ರಹಣೆ ಉದರಿ ನೀಡಿಕೆಗಳೇ ಮುಖ್ಯ ಕಾರ್ಯಭಾರಗಳಾಗಿದ್ದು, ಇವೆರಡರ ಬಡ್ಡಿದರಗಳ ಅಂತರವನ್ನೇ ಅವಲಂಬಿಸಿ ಬೆಳೆದುಬಂದ ಬ್ಯಾಂಕುಗಳು ಇಂದು ಹೊಸ ಹೊಸ ದಿಕ್ಕುಗಳಲ್ಲಿ ಮತ್ತು ದಿಗಂತಗಳಿಂದಾಚೆಗೆ ದೃಷ್ಟಿ ಹಾಯಿಸುತ್ತಿವೆ, ದಾಪುಗಾಲು ಹಾಕುತ್ತಿವೆ. ಬ್ಯಾಂಕಿಂಗ್ ಪ್ರಪಂಚದಲ್ಲೊಂದು ಹೊಸ ಅಲೆಯೋ ಎದ್ದಿದೆ.**

**ಕುಮುದ ರಾಮಾನುಜಂ**
ವಾಣಿಜ್ಯಶಾಸ್ತ್ರ ಅಧ್ಯಾಪಕಿ
ರಾಮನಾರಾಯಣ ಚೆಲ್ಲಾರಾಂ ವಾಣಿಜ್ಯ ಕಾಲೇಜು
ಬೆಂಗಳೂರು ೧

ಎರಡು ದಶಕಗಳ ಹಿಂದಿನ ಮಾತು. ಭಾರತದಲ್ಲಿ ವಾಣಿಜ್ಯ ಬ್ಯಾಂಕುಗಳ ವ್ಯವಹಾರಗಳು ಲಾಭದಾಯಕವಾಗಿದ್ದ ಆ ಕಾಲದಲ್ಲಿ ಬಡ್ಡಿಗಳಿಕೆ ಮಾತ್ರ ಬ್ಯಾಂಕುಗಳ ಪ್ರಮುಖ ಆದಾಯಮೂಲವಾಗಿತ್ತು. ಭಾರತೀಯ ರಿಸರ್ವ್ ಬ್ಯಾಂಕ್ ನಿಗದಿಸಿರುವ ವಿವಿಧ ಬಡ್ಡಿದರಗಳ ಪ್ರಕಾರ ವಾಣಿಜ್ಯ ಬ್ಯಾಂಕುಗಳು ಠೇವಣಿಗಳಿಗೆ ಕೊಡುವ ಬಡ್ಡಿಯ ದರ ಕಡಿಮೆಯಾಗಿರುತ್ತದೆ ಮತ್ತು ಸಾಲಗಳಿಗೆ ವಿಧಿಸುವ ಬಡ್ಡಿಯ ದರ ಅಧಿಕವಾಗಿರುತ್ತದೆ. ಆದ್ದರಿಂದ ಈ ಎರಡು ದರಗಳ ವ್ಯತ್ಯಾಸವೇ ಬ್ಯಾಂಕುಗಳು ಗಳಿಸುವ ಲಾಭವಾಗಿದೆ. ಹೀಗೆ ಬ್ಯಾಂಕುಗಳ ಲಾಭಗಳಿಕೆ ಬಡ್ಡಿಯ ಹರವಿನ ಅನುಪಾತವನ್ನವಲಂಬಿಸಿರುತ್ತದೆ. ಹಿಂದೆ ವಾಣಿಜ್ಯ ಬ್ಯಾಂಕುಗಳು ಶ್ರೀಸಾಮಾನ್ಯರಿಂದ ಸಂಗ್ರಹಿಸಿದ ಠೇವಣಿಗಳನ್ನು ಶ್ರೀಮಂತರಿಗೆ ಮತ್ತು ಭದ್ರತೆ ಒದಗಿಸಿದವರಿಗೆ ಉದರಿ ನೀಡಲು ಉಪಯೋಗಿಸುತ್ತಿದ್ದುವು. ಆಯ್ದ ಕೈಗಾರಿಕೋದ್ಯಮಿಗಳಿಗೂ ಯೋಗ್ಯ ವಾಣಿಜ್ಯೋದ್ಯಮಿಗಳಿಗೂ ಮತ್ತಿತರರ ವಿಶ್ವಾಸಾರ್ಹ ವ್ಯವಹಾರಗಳಿಗೂ ಅಲ್ಪಾವಧಿಸಾಲ, ಹೆಚ್ಚೆಂದರೆ ಮಧ್ಯಮಾವಧಿ ಸಾಲ/ಮುಂಗಡ, ಭದ್ರತೆ ಒದಗಿಸಿದ ಅನಂತರ, ದೊರಕುತ್ತಿತ್ತು. ಅಂದು ಬ್ಯಾಂಕೇತರ ಹಣಕಾಸು ಸಂಸ್ಥೆಗಳ ವಿರಳತೆಯಿಂದಾಗಿ ಪೈಪೋಟಿರಹಿತ ಮಾರುಕಟ್ಟೆಯಲ್ಲಿ ವಾಣಿಜ್ಯ ಬ್ಯಾಂಕುಗಳದೇ ಮೇಲುಗೈಯಾಗಿತ್ತು. ಸಾಲಗಳಿಗೆ ವಿಧಿಸುತ್ತಿದ್ದ ಬಡ್ಡಿಯ ದರಗಳು ಹೆಚ್ಚಾಗಿಯೇ ಇರುತ್ತಿದ್ದುವು. ಹೀಗಿದ್ದ ವ್ಯವಸ್ಥಿತ ಹಣ ಪೇಟೆಯಲ್ಲಿ ಹಾದಿ ಕಾಣದ ಬಡ ರೈತರಿಗೆ ಅವರ ಸಂಕಟದ ಸಮಯದಲ್ಲಿ ಸಾಲ ನೀಡಿ, ಸರಳ ಬಡ್ಡಿ–ಚಕ್ರ ಬಡ್ಡಿಯ ರೂಪದಲ್ಲಿ ಲಾಭ ಗಳಿಸುತ್ತಿದ್ದವರು ಸಾಹುಕಾರರು, ಶ್ರೇಷ್ಠಿಗಳು, ಮಾರ್ವಾಡಿಗಳು ಮುಂತಾದವರು. ಅಂದು ಮಧ್ಯಮ ವರ್ಗದವರಿಗೆ, ದುರ್ಬಲ ವರ್ಗದವರಿಗೆ, ಹಳ್ಳಿಗಾಡಿನವರಿಗೆ ಮತ್ತು ಸಣ್ಣ ಪುಟ್ಟ ಉದ್ಯಮಿಗಳಿಗೆ, ವ್ಯಾಪಾರಿಗಳಿಗೆ ಬ್ಯಾಂಕ್ ಸಾಲ ಸೌಲಭ್ಯ ಮರೀಚಿಕೆಯಂತಿತ್ತು.

1947ರ ಅನಂತರ ಭಾರತ ಸರ್ಕಾರ ರಿಸರ್ವ್ ಬ್ಯಾಂಕಿನ ಉದರಿ ನಿಯಂತ್ರಣದ ನಾನಾ ವಿನ್ಯಾಸಗಳ ಬೆಂಬಲದಿಂದ ಮತ್ತು ಭಾರತೀಯ ಸ್ಟೇಟ್ ಬ್ಯಾಂಕಿನ ಶಾಖೆಗಳ ಮೂಲಕ ಗ್ರಾಮಾಂತರ ಪ್ರದೇಶಗಳ ಕೃಷಿಕರಿಗೆ, ಕೃಷಿ ಆಧಾರಿತ ವ್ಯವಹಾರಗಳಿಗೆ, ಗ್ರಾಮ ಕೈಗಾರಿಕೆಗಳಿಗೆ ಆಯ್ದ ಉದ್ಯಮಗಳಿಗೆ ಮತ್ತು ಸಾರಿಗೆ ಸೌಲಭ್ಯಗಳಿಗೆ ಉದರಿ ಒದಗಿಸಿ ಆರ್ಥಿಕ ಬೆಳವಣಿಗೆಯ ಧ್ಯೇಯವನ್ನು ಸಾಧಿಸಲು ಹೊರಟಾಗ ಬ್ಯಾಂಕಿಂಗ್ ಹೊಸ ಹಾದಿ ಹಿಡಿಯಿತು. ಹೀಗಾಗಿ ವಾಣಿಜ್ಯ ಬ್ಯಾಂಕುಗಳ ಆಧಾರ ತತ್ವಗಳಾದ ಭದ್ರತೆ, ದ್ರವತ್ವ ಮತ್ತು ಲಾಭತ್ವಗಳಿಗೆ ಮೊದಲಿದ್ದ ಪ್ರಾಮುಖ್ಯ ಕಡಿಮೆಯಾಗಿ, ದೇಶದ ಪ್ರಗತಿಗಾಗಿ ಬ್ಯಾಂಕುಗಳ ವ್ಯವಹಾರದ ತತ್ವಗಳನ್ನೆ ಬದಲಾಯಿಸಲಾಯಿತು. ಸಾಲದ ವ್ಯವಹಾರಗಳಲ್ಲಿ ಗೋಚರ ಭದ್ರತೆಯ ಬದಲು ಸಾಲಗಾರನ ಉತ್ಪಾದನ ಸಾಮರ್ಥ್ಯಕ್ಕೆ, ಸಾಲದ ಅವಧಿ ಹಾಗೂ ಉದ್ದೇಶಕ್ಕೆ ಪ್ರಾಮುಖ್ಯ ಕೊಡಲಾಯಿತು. ಹೂಡಿಕೆ ವ್ಯವಹಾರದಲ್ಲಿ ದ್ರವತ್ವ ಮತ್ತು ಲಾಭತ್ವದ ಬದಲು ವರ್ಗಾವಣೆ ಮತ್ತು ಭವಿಷ್ಯದ ಗಳಿಕೆಗೆ ಪ್ರಾಮುಖ್ಯ ಕೊಡಲಾಯಿತು. ಆ ಸಮಯದಲ್ಲಿ ವಿಮಾ ಸಂಸ್ಥೆಗಳ, ಇತರ ಹಣಕಾಸಿನ ಸಂಸ್ಥೆಗಳ ಹಾಗೂ ವ್ಯವಸ್ಥಿತ ಹಣಪೇಟೆಯ ಬೆಳವಣಿಗೆಯಿಂದ ವಾಣಿಜ್ಯ ಬ್ಯಾಂಕುಗಳು ತಮ್ಮ ವ್ಯವಹಾರಗಳಲ್ಲಿ ಹೊಸ ತತ್ವಗಳನ್ನು ಅನುಸರಿಸಲು ಸಾಧ್ಯವಾಯಿತು. ಕಾಲಕ್ಕೆ ತಕ್ಕಂತೆ ಬ್ಯಾಂಕ್ ವ್ಯವಹಾರದ ನಿಯಮ ನಿಬಂಧನೆಗಳಲ್ಲಿಯೂ ತಿದ್ದುಪಡಿ ಮತ್ತು ಬದಲಾವಣೆಗಳಾದುವು. ಇಂದು ಪ್ರಪಂಚಾದ್ಯಂತ ಬ್ಯಾಂಕುಗಳು ಸಾಲಗಳ ವ್ಯವಹಾರದ ಸಾಂಪ್ರದಾಯಿಕತೆಯನ್ನು ಭೇದಿಸಿ, ಬಡ್ಡಿಗಳಿಕೆಯನ್ನು ಒತ್ತರಿಸಿ, ಲಾಭಾನ್ವೇಷಣೆಯಲ್ಲಿ, ಮತ್ತೆ ನವೋನ್ಮೇಷ ಬ್ಯಾಂಕ್ ವ್ಯವಹಾರಗಳಲ್ಲಿ ಆಸಕ್ತಿ ತಳೆದಿವೆ. ಆದ್ದರಿಂದ ಹಿಂದೆ ಬಡ್ಡಿ ಗಳಿಕೆಗಿದ್ದ ಪ್ರಾಮುಖ್ಯ ಇಂದು ಬ್ಯಾಂಕುಗಳ ಸೇವಾಶುಲ್ಕ, ಕಮಿಷನ್ ಮತ್ತಿತರ ಸಂದಾಯಗಳಿಗೆ ಸಿಕ್ಕಿದೆ. ನಮ್ಮ ದೇಶದಲ್ಲಿ ಸರ್ವತೋಮುಖ ಆರ್ಥಿಕಾಭಿವೃದ್ಧಿಯಿಂದಲೂ, ಜನರ ಜೀವನಮಟ್ಟ ಸುಧಾರಿಸಿರುವುದರಿಂದಲೂ ಅನುಭೋಗಿಗಳ ಕೊಳ್ಳಿಕೆ–ಉಳಿಕೆ-ಹೂಡಿಕೆಗಳಲ್ಲಿ ಸಾಮರ್ಥ್ಯ ಹೆಚ್ಚಿದೆ. ವಾಣಿಜ್ಯ ಬ್ಯಾಂಕುಗಳು ತಮ್ಮ ಗ್ರಾಹಕರನ್ನು ಆವಶ್ಯಕತೆಗಳಿಗನುಸಾರವಾಗಿ ವಿಂಗಡಿಸಿ, ಅವರವರ ಸಾಮರ್ಥ್ಯಕ್ಕೆ ತಕ್ಕಂತೆ ಉದರಿ ಸೌಲಭ್ಯವನ್ನು, ಹಣಕಾಸಿನ ಸೇವೆಯನ್ನು, ಇತರ ಸಲಹೆಗಳನ್ನು ಒದಗಿಸಲು ವಿಶೇಷ ಸೇವಾಸಂಸ್ಥೆಗಳ ಮೂಲಕ ನವೋನ್ಮೇಷ ಬ್ಯಾಂಕ್ ವ್ಯವಹಾರಗಳಲ್ಲಿ ತೊಡಗಿವೆ. ಭಾರತದ ವಾಣಿಜ್ಯ ಬ್ಯಾಂಕುಗಳು ಮತ್ತು ಸರ್ಕಾರಿ ವಲಯದ ಬ್ಯಾಂಕುಗಳು 1980ರ ಅನಂತರ ಲಾಭಾನ್ವೇಷಣೆಯಲ್ಲಿರುವುದು ಏಕೆ? ಹೇಗೆ? ನವೋನ್ಮೇಷ ಬ್ಯಾಂಕ್ ವ್ಯವಹಾರಗಳಿಂದ ಎಲ್ಲ ಸಮಸ್ಯೆಗಳಿಗೂ ಪರಿಹಾರವಿದೆಯೇ? ಬ್ಯಾಂಕುಗಳ ಲಾಭಗಳಿಕೆಯನ್ನು ಉತ್ತಮವಾಗಿಸುವ ರೀತಿ ಯಾವುದು?—ಎಂಬುದನ್ನು ತಿಳಿಯಲು ಈ ಲೇಖನದಲ್ಲಿ ಪ್ರಯತ್ನಿಸಿದೆ.

1969ರಲ್ಲಿ ಮತ್ತು ಅನಂತರ ರಾಷ್ಟ್ರೀಕೃತವಾದ ವಾಣಿಜ್ಯ ಬ್ಯಾಂಕುಗಳು ಸಾಮಾಜಿಕ ಹೊಣೆಗಳನ್ನು ಹೊತ್ತು, ಭಾರತೀಯ ರಿಸರ್ವ್ ಬ್ಯಾಂಕಿನ ಆದೇಶದಂತೆ ಆದ್ಯತಾವಲಯಗಳಿಗೆ, ದುರ್ಬಲವರ್ಗದವರಿಗೆ, ಅಸ್ವಸ್ಥ ಘಟಕಗಳಿಗೆ ಉದರಿಯನ್ನು ಒದಗಿಸುತ್ತಿವೆ. ಈ ಬ್ಯಾಂಕುಗಳು ಇಂದು ಕುಗ್ರಾಮಗಳಲ್ಲಿರುವ ಸುಪ್ತ ಸಂಪನ್ಮೂಲಗಳನ್ನು ಉತ್ಪಾದನೆಯಲ್ಲಿ ತೊಡಗಿಸಿ, ವ್ಯಾಪಾರವನ್ನು ಕುದುರಿಸಲು, ಅಲ್ಲಿಯ ಜನರ ಉತ್ಪಾದನ ಸಾಮರ್ಥ್ಯವನ್ನು ಹೆಚ್ಚಿಸಲು, ಮರಳ್ಗಾಡನ್ನು ಹಸಿರಾಗಿಸಲು ಮತ್ತು ಬೆಟ್ಟಕಾಡುಗಳಲ್ಲಲೆಯುವವರಿಗೆ ನೆಲೆ ನೀಡಲು, ಸಹಸ್ರಾರು ಹಳ್ಳಿಗಳಲ್ಲಿ ತಮ್ಮ ಶಾಖೆಗಳನ್ನು ತೆರೆದು, ಠೇವಣಿಗಳ ಸಂಚಾಲನದಿಂದ ಹೀನಸ್ಥಿತಿಯಲ್ಲಿರುವ ಜನತೆಗೆ ಉದರಿಯ ವರದಾನ ನೀಡಿ, ಜೀವನಾವಶ್ಯಕತೆಗಳನ್ನು ತಾವೇ ಗಳಿಸಲು ಮಾರ್ಗದರ್ಶನ ನೀಡುತ್ತಿವೆ. ಇಂಥ ಸಂದರ್ಭಗಳಲ್ಲಿ ವ್ಯಾಪಾರಿ ಮನೋವೃತ್ತಿ ಮತ್ತು ಲಾಭದೃಷ್ಟಿ ಅನ್ವಯಿಸುವುದಿಲ್ಲವಾದರೂ, ಬ್ಯಾಂಕುಗಳು ಹಿಂದುಳಿದ ಪ್ರದೇಶಗಳ ಆರ್ಥಿಕಾಭಿವೃದ್ಧಿಯನ್ನು ಹಾಗೂ ದೀರ್ಘಾವಧಿಯಲ್ಲಿ ಗಳಿಕೆಗಳನ್ನು ಮುಂಗಾಣಬೇಕಾಗಿದೆ. ಇದರ ಜೊತೆಗೆ ರಾಷ್ಟ್ರಾದ್ಯಂತ ನಿರುದ್ಯೋಗ ನಿವಾರಣೆಗೂ, ದಾರಿದ್ರ್ಯ ನಿರ್ಮೂಲನಕ್ಕೂ ಉದರಿ ಹರಿದು ಹೋಗುತ್ತಿದೆ. ನಷ್ಟಕ್ಕೀಡಾದ ಕೈಗಾರಿಕೆಗಳಿಂದ ಸಾಲ ವಸೂಲಾತಿ ಸಮಸ್ಯೆಗಳಿಗೆ ಪರಿಹಾರ ಕಾಣದ ಬ್ಯಾಂಕುಗಳು ಕರಡು ಋಣಗಳ ಭಾರದಿಂದ ಮುಗ್ಗರಿಸುವಂತಾಗಿದೆ. ವಾಣಿಜ್ಯ ಬ್ಯಾಂಕುಗಳ ಲಾಭದ ಕುಸಿತಕ್ಕೆ ಇದು ಪ್ರಮುಖ ಕಾರಣವಾದರೆ, ಬ್ಯಾಂಕುಗಳ ದೈನಿಕ ವ್ಯವಹಾರಗಳಲ್ಲಿ ಹಲವಾರು ಅಂಶಗಳು ಲಾಭವನ್ನು ಕುಂದಿಸುವ ಪರಿಣಾಮ

ಹೊಂದಿವೆ. ಅವನ್ನು ಮುಂದೆ ಕಾಣಿಸಿದೆ:

1 ಬ್ಯಾಂಕುಗಳ ದೈನಿಕ ವ್ಯವಹಾರಗಳು ಬ್ಯಾಂಕಿಂಗ್ ಅಧಿನಿಯಮದ ನಿಬಂಧನೆಗಳಿಗೂ ನಿಯಂತ್ರಣಗಳಿಗೂ ಒಳಪಟ್ಟಿವೆ. ಆದ್ದರಿಂದ ಅಧಿಕ ದರದ ಬಡ್ಡಿಯಾಸೆಯನ್ನು ತೊರೆದು ಸರ್ಕಾರಿ ಪ್ರತಿಭೂತಿಗಳಲ್ಲಿ ಬ್ಯಾಂಕುಗಳು ಹಣ ತೊಡಗಿಸ ಬೇಕಾಗಿದೆ.

2 ರಿಸರ್ವ್ ಬ್ಯಾಂಕಿನ ಆದೇಶದಂತೆ ಬ್ಯಾಂಕುಗಳು ಉದರಿಯನ್ನು ವಿನಿಯೋಜಿಸಬೇಕಾಗಿದೆ. ಹಾಗೂ ಪರಿನಿಯತ ದ್ರವತ್ವ ಮತ್ತು ನಗದು ಮೀಸಲು ಅನುಪಾತಗಳನ್ನು ಪಾಲಿಸಬೇಕಾಗಿದೆ. ಉದಾಹರಣೆಗೆ, ಒಂದು ವಾಣಿಜ್ಯ ಬ್ಯಾಂಕು 100 ರೂ.ಗಳ ಠೇವಣಿಯನ್ನು ಹೀಗೆ ಉಪಯೋಗಿಸ ಬೇಕಾಗಿದೆ: ರೂ. 38.5 ಪರಿನಿಯತ ದ್ರವತ್ವ ಅನುಪಾತಕ್ಕೆ. ರೂ. 15 ನಗದು ಮೀಸಲು ಅನುಪಾತಕ್ಕೆ, ಇವಲ್ಲದೆ ಆದ್ಯತಾವಲಯ, ಆಹಾರ ಸಂಗ್ರಹಣೆ, ಅಸ್ವಸ್ಥ ಘಟಕ ದುರ್ಬಲವರ್ಗಗಳ ದಾರಿದ್ರ್ಯ ನಿರ್ಮೂಲನ ಮುಂತಾದವಕ್ಕಾಗಿ ಹಣವನ್ನು ಎತ್ತಿಟ್ಟ ಮೇಲೆ ಲಾಭದಾಯಕ ಹೂಡಿಕೆಗೆ ಮಿಗುವುದು ಬಹಳ ಅಲ್ಪ.

3 ಬ್ಯಾಂಕುಗಳ ಶಾಖಾ ವಿಸ್ತರಣೆಯಿಂದಾಗಿ ಠೇವಣಿಗಳ ಸಂಗ್ರಹಣೆಯು ಮೊತ್ತದಲ್ಲಿ ಏರಿಕೆಯಾಗಿದ್ದರೂ, ಹಣಪೇಟೆಯಲ್ಲಿಯ ಪೈಪೋಟಿಯ ಕಾರಣದಿಂದ ಠೇವಣಿ ಸಂಗ್ರಹಣೆಯು ದರ ವರ್ಷದಿಂದ ವರ್ಷಕ್ಕೆ ಕಡಿಮೆಯಾಗುತ್ತಿದೆ. ಇದಕ್ಕೆ ಕಾರಣ ಹಣಕಾಸಿನ ಪೇಟೆಯಲ್ಲಿ ಉಳಿತಾಯದ ಸಂಚಾಲನೆಗೆ ಮತ್ತು ಠೇವಣಿಗಳ ಸಂಗ್ರಹಣೆಗಾಗಿ ಬಡ್ಡಿಯ ದರವನ್ನು ಹೆಚ್ಚಿಸಿ ಠೇವಣಿದಾರರನ್ನು ಆಕರ್ಷಿಸುತ್ತಿರುವ ಬ್ಯಾಂಕೇತರ ಸಂಸ್ಥೆಗಳ ಮತ್ತು ಸರ್ಕಾರದ ಆದಾಯ ಕರ ರಿಯಾಯಿತಿ ಇರುವ ಉಳಿತಾಯ ಯೋಜನೆಗಳು.

4 ಈಚೆಗೆ ವಾಣಿಜ್ಯ ಬ್ಯಾಂಕುಗಳ ಪರಿಚಾಲನಾ ದಕ್ಷತೆ ಇಳಿಮುಖವಾಗಿರುವುದಕ್ಕೆ ಕಾರಣಗಳು: ಬ್ಯಾಂಕ್ ಸಿಬ್ಬಂದಿಗಳ ಸಂಬಳ ಮತ್ತು ಭತ್ಯೆಗಳಲ್ಲಿ ನಿರಂತರ ಏರಿಕೆ, ಸಂಘಟನೆ ಮತ್ತು ಅಧೋರಚನೆಯ ವೆಚ್ಚಗಳಲ್ಲಿ ಅಧಿಕತೆ ಹಾಗೂ ಬ್ಯಾಂಕ್ ಸೇವೆಗಳಿಗೆ ಅನ್ವಯಿಸುವಂತೆ ವೆಚ್ಚ ನಿಯಂತ್ರಣ ವಿಧಾನಗಳು ಆಚರಣೆಯಲ್ಲಿ ಇಲ್ಲದಿರುವುದು.

ಈ ಸಮಸ್ಯೆಗಳಿಂದ ತೊಂದರೆಗೀಡಾದ ಸರ್ಕಾರಿ ವಲಯದ ಬ್ಯಾಂಕುಗಳ ಸ್ಥಿತಿಯನ್ನರಿತ ಭಾರತ ಸರ್ಕಾರ ಮತ್ತು ರಿಸರ್ವ್ ಬ್ಯಾಂಕ್, ಬ್ಯಾಂಕುಗಳ ಆದಾಯವನ್ನು ಹೆಚ್ಚಿಸಲು ಕೆಲವು ಸುಧಾರಣೆಗಳನ್ನು ಜಾರಿಗೆ ತಂದಿವೆ. ಅವನ್ನು ಮುಂದೆ ಕಾಣಿಸಿದೆ:

1 ಕೇಂದ್ರ ಮತ್ತು ರಾಜ್ಯ ಸರ್ಕಾರದ ಕೂಪನ್ ದರದಲ್ಲಿ ಏರಿಕೆ.

2 ಬ್ಯಾಂಕುಗಳ ತಗಾದೆ ಮತ್ತು ನಿಯತಕಾಲಿಕ ಠೇವಣಿಗಳ ಮೊತ್ತದಲ್ಲಿ ಶೇ. ೩ಕ್ಕಿಂತ ಹೆಚ್ಚಾಗಿರುವ ನಗದು ಮೀಸಲಿನ ಅನುಪಾತಕ್ಕೆ ಬಡ್ಡಿಯ ಪಾವತಿ.

3 ಸರ್ಕಾರಿ ವಲಯದ ಬ್ಯಾಂಕುಗಳ ಷೇರು ಬಂಡವಾಳದಲ್ಲಿ ಹಣದ ಹೂಡಿಕೆ.

4. ಹಣಪೇಟೆಯಲ್ಲಿ ಪ್ರಮುಖ ಬಡ್ಡಿದರಗಳಾದ—ಸಾಲಗಳ ಗರಿಷ್ಠ ದರ, ಕರೆ ಹಣ ಮತ್ತು ಅಂತರ ಬ್ಯಾಂಕುಗಳ ಕಾಲಿಕ ಹಣದ ದರ, ಮರು ವಟಾವಣೆ ದರ, ಅಂತರ ಬ್ಯಾಂಕು ಹಾನಿರಹಿತ ಭಾಗಿದರಗಳನ್ನು ಮುಕ್ತದರಗಳಾಗಿಸಿವೆ.

5 ಬ್ಯಾಂಕು ನಿಧಿಗಳ ನಿರ್ವಹಣೆಯಲ್ಲಿ ನಮ್ಯತೆಗಾಗಿ ನೀಡುತ್ತಿರುವ ಠೇವಣಿ ಪ್ರಮಾಣ ಪತ್ರಗಳು ಬ್ಯಾಂಕುಗಳಿಗೆ ಅಲ್ಪಕಾಲಿಕ ನಿಧಿಗಳನ್ನು ಒದಗಿಸುವುದಲ್ಲದೆ ಇತರ ಸಂಸ್ಥೆಗಳಿಗೂ ಹಣ ಹೂಡಿಕೆಯಲ್ಲಿ ದ್ರವತ್ವದ ಅನುಕೂಲತೆಯನ್ನು ಒದಗಿಸಿವೆ. ವಾಣಿಜ್ಯ ಪತ್ರಗಳಿಗೆ ಪ್ರತಿಭೂತಿಕರಣದ ಸೌಲಭ್ಯವಿರುವುದರಿಂದ, ಭಾರಿ ಸಂಸ್ಥೆಗಳು ಬ್ಯಾಂಕುಗಳನ್ನವಲಂಬಿಸದೆ ಮುಕ್ತಪೇಟೆಯಲ್ಲಿ ಪೈಪೋಟಿಯ ದರದಲ್ಲಿ ನಿಧಿಗಳನ್ನು ಎತ್ತಬಹುದು. ಈ ವ್ಯವಹಾರದಲ್ಲಿ ಸಂಸ್ಥಾಗ್ರಾಹಕರಿಂದ ಗಳಿಸುತ್ತಿದ್ದ ಬಡ್ಡಿ ಇಲ್ಲದೆ ಹೋದರೂ, ಬ್ಯಾಂಕುಗಳಿಗೆ ಮಧ್ಯವರ್ತಿ ಸೇವಾಶುಲ್ಕದ ಗಳಿಕೆ ಹೆಚ್ಚಾಗಿರುತ್ತದೆ.

5 ವಾಣಿಜ್ಯ ಬ್ಯಾಂಕುಗಳು ತಮ್ಮ ಲಾಭವನ್ನು ಹೆಚ್ಚಿಸಿಕೊಳ್ಳಲು ಅನುಭೋಗಿ ಸರಕು ಮತ್ತು ಸೇವೆಗಳ ಮಾರುಕಟ್ಟೆಯನ್ನು ಹೊಕ್ಕಿವೆ, ದಿನ ಬಳಕೆಯ ಸೇವೆ ಮತ್ತು ಸರಕುಗಳ ವ್ಯವಹಾರಗಳಲ್ಲಿ ನಗದಿನ ಬಳಕೆಯನ್ನು ಕಡಿಮೆ ಮಾಡಲು ಉದರಿ ಕಾರ್ಡುಗಳನ್ನು ಮತ್ತು ಬಳಕೆದಾರ ಉದರಿಯನ್ನು ಉಚ್ಚವರ್ಗದ ಮತ್ತು ಮಧ್ಯಮವರ್ಗದ ಅನುಭೋಗಿಗಳಿಗೆ ನೀಡುತ್ತಿವೆ. ಇವಲ್ಲದೆ ತಮ್ಮ ಗ್ರಾಹಕರ ಪರವಾಗಿ ಖಾತಾ ನಿರ್ವಹಣೆಯ ವ್ಯವಹಾರವನ್ನು ನಡೆಸುತ್ತಿವೆ.

6 ಮುಕ್ತ ಪೇಟೆಯಲ್ಲಿ ಹಣಕಾಸಿನ ಸೇವಗಳಿಗಾಗಿ ಹೊಸ ವ್ಯವಹಾರಗಳನ್ನು ಪ್ರಾರಂಭಿಸಲು ಈಗ ಸರ್ಕಾರಿ ವಲಯದ ಬ್ಯಾಂಕುಗಳಿಗೆ ಸ್ವಾತಂತ್ರ್ಯವಿದೆ. ವಿವಿಧ ವಿಶೇಷ ಸೇವೆಗಳಿಗಾಗಿ ರಾಷ್ಟ್ರೀಕೃತ ಬ್ಯಾಂಕುಗಳು ಸಹಾಯಕ ಸಂಸ್ಥೆಗಳನ್ನು ರಚಿಸಿ ಲಾಭ ಗಳಿಸಬಹುದು. ಈ ಸಹಾಯಕ ಸಂಸ್ಥೆಗಳಿಗೆ ವಾಣಿಜ್ಯ ಬ್ಯಾಂಕುಗಳ ವ್ಯವಹಾರದ ನಿಯಮ ನಿಬಂಧನೆಗಳು ಅನ್ವಯಿಸುವುದಿಲ್ಲ. ಈ ಸೇವೆಗಳಲ್ಲಿ ವಣಿಕ ಬ್ಯಾಂಕಿಂಗ್, ಗುತ್ತಿಗೆ ವ್ಯವಹಾರ, ಉಪಕ್ರಮ ಬಂಡವಾಳ. ಪರಸ್ಪರ ನಿಧಿಗಳು. ಋಣಾಭಿಕರಣ ವ್ಯವಹಾರ, ಗೃಹನಿರ್ಮಾಣ ವ್ಯವಹಾರ ಮೊದಲಾದವೂ ಸೇರಿವೆ.

ಈಚೆಗೆ ವಾಣಿಜ್ಯ ಬ್ಯಾಂಕುಗಳ ಪ್ರಚಾರ ಹೆಚ್ಚಾಗಿರುವ ಉದರಿ ಕಾರ್ಡು, ಬಳಕೆದಾರ ಉದರಿ ಮತ್ತು ಸಹಾಯಕ ಸಂಸ್ಥೆಗಳ ಸೇವಾ ವಿವರಗಳನ್ನು ತಿಳಿದರೆ, ಈ ನವ್ಯ ವ್ಯವಹಾರಗಳಿಂದ ಬ್ಯಾಂಕುಗಳಿಗೆ ನಿಜವಾಗಿ ಲಾಭಗಳಿಕೆ ಹೆಚ್ಚುವುದೋ ಅಥವಾ ನಷ್ಟಸಂಭವಗಳೇ ಹೆಚ್ಚುವುವೋ, ಹಾಗಾದರೆ ಬ್ಯಾಂಕುಗಳು ಮುಂದೇನು ಮಾಡಬೇಕಾಗಿದೆ ಎಂಬುದನ್ನು ಸ್ವಲ್ಪಮಟ್ಟಿಗೆ ಅರಿಯಬಹುದು.

**1 ಉದರಿ ಕಾರ್ಡು ಮತ್ತು ಬಳಕೆದಾರ ಉದರಿ**

ಮಧ್ಯಮ ವರ್ಗದವರಿಗೆ, ವೇತನ ಪಡೆಯುವ ವರ್ಗದವರಿಗೆ ನೆರವಾಗಲು ಬ್ಯಾಂಕುಗಳು ವಿವಿಧ ಯೋಜನೆಗಳ ಮೂಲಕ ಬಳಕೆದಾರ ಉದರಿಯನ್ನು ನೀಡುತ್ತಿವೆ. ಸ್ವಂತ ಉಪಯೋಗಕ್ಕಾಗಿ ವಾಹನ, ಶೀತೋಪಕರಣ, ದೂರದರ್ಶಕ, ರೆಫ್ರಿಜಿರೇಟರ್, ಗೃಹಗಣಕ ಮುಂತಾದ ಅನುಕೂಲದ ಮತ್ತು ಭೋಗ ವಸ್ತುಗಳನ್ನು ಕೊಳ್ಳಲು ಅನುಭೋಗಿಗಳಿಗೆ ಠೇವಣಿ ಜೋಡಣೆಯ ಸಾಲಗಳನ್ನೂ ನೇರ ಸಾಲಗಳನ್ನೂ ಕೊಡುತ್ತಿವೆ. ಇವಕ್ಕೆ ಶೇ. 15-16.5 ಬಡ್ಡಿ ಸಿಗುತ್ತದೆ. ಬಳಕೆದಾರ ಉದರಿಯ ಮೂಲಕ ಬ್ಯಾಂಕುಗಳು ಗ್ರಾಹಕರ ಠೇವಣಿಗಳನ್ನು ಸಂಗ್ರಹಿಸುವುದ ಜೊತೆಗೆ ಉತ್ಪಾದಕರ ಮತ್ತು ಮಾರಾಟ ಸಂಸ್ಥೆಗಳ ಠೇವಣಿ ಮತ್ತು ಸಾಲಖಾತೆಗಳ ವ್ಯವಹಾರದಿಂದ ಬಡ್ಡಿ, ಸೇವಾಶುಲ್ಕ ಹಾಗೂ ಕಮಿಷನ್‌ಗಳನ್ನು ಗಳಿಸಬಹುದು.

ಮೊಟ್ಟಮೊದಲು ಉದರಿ ಕಾರ್ಡನ್ನು ಬಳಕೆಗೆ ತಂದಾಗ ವಿದೇಶಿ ಪ್ರವಾಸಿಗಳ ಮತ್ತು ಪ್ರವಾಸಿ ವ್ಯಾಪಾರಿಗಳ ಅನುಕೂಲಕ್ಕಾಗಿ ಹಾಗೂ ಪ್ರವಾಸ ಸಮಯದಲ್ಲಿ ಭದ್ರತೆಗಾಗಿ, ಬ್ಯಾಂಕುಗಳು ನಿಗದಿತ ಮೌಲ್ಯದ ಉದರಿ ಕಾರ್ಡನ್ನು ನೀಡುತ್ತಿದ್ದುವು. ಬ್ಯಾಂಕುಗಳ ವಿದೇಶಿ ವಿನಿಮಯದ ಗಳಿಕೆಗೆ ವಿದೇಶೀಯರ ಉದರಿ ಕಾರ್ಡುಗಳು ನೆರವಾಗುತ್ತಿದ್ದುವು. ಈಚೆಗೆ ಭಾರತದ ರಾಷ್ಟ್ರೀಕೃತ ಬ್ಯಾಂಕುಗಳು ಮತ್ತು ಬ್ಯಾಂಕೇತರ ಸಂಸ್ಥೆಗಳು ರಾಷ್ಟ್ರೀಯ ಪೇಟೆಯಲ್ಲಿ ಮಾತ್ರ ಬಳಸಲು ಉದರಿ ಕಾರ್ಡನ್ನು ನೀಡುತ್ತಿವೆ. ಈ ಕಾರ್ಡನ್ನು ಪಡೆಯಲು ಬ್ಯಾಂಕಿನಲ್ಲಿ ಗ್ರಾಹಕ 5-10 ಸಾವಿರ ರೂಪಾಯಿಗಳ ಠೇವಣಿ ಇಟ್ಟಿರಬೇಕು ಅಥವಾ ಆ ಮೌಲ್ಯದ ಮೀರೆಳೆತದ ಮಿತಿ ಪಡೆದಿರಬೇಕು. ಅನಂತರ ಅವನು ನಗದು ಹಣವಿಲ್ಲದೆ ಉದರಿ ಕಾರ್ಡನ್ನು ತೋರಿಸಿ ನಿಗದಿತ ಕೇಂದ್ರ/ಸಂಸ್ಥೆಗಳಿಂದ ಸರಕುಗಳನ್ನು ಹಾಗೂ ವಿವಿಧ ಸೇವೆಗಳನ್ನು ಪಡೆಯಬಹುದು. ಮಾರುವ ಸಂಸ್ಥೆಗಳಿಂದ ಬ್ಯಾಂಕುಗಳಿಗೆ ಕಮಿಷನ್ ದೊರಕುತ್ತದೆ. ಮಧ್ಯಮ ವರ್ಗದಲ್ಲಿ ಉದರಿ ಕಾರ್ಡಿನ ಬಳಕೆಯನ್ನು ಹೆಚ್ಚಿಸಲು ಸಕಲ ವಸ್ತುಗಳು ಒಂದೆಡೆ ಸಿಗುವಂತಹ ಭಾರಿ ಮಳಿಗೆಗಳ ನಿರ್ಮಾಣದ ಯೋಜನೆಯೂ ಇದೆ. ಈ ವ್ಯವಹಾರಗಳ ದಾಖಲೆಗಾಗಿ ಬ್ಯಾಂಕುಗಳಲ್ಲಿ ಮತ್ತು ವ್ಯಾಪಾರ ಕೇಂದ್ರಗಳಲ್ಲಿ ಗಣಕ ಯಂತ್ರಗಳ ಜಾಲವನ್ನು ಅಳವಡಿಸುವ ಯೋಜನೆಯೂ ಇದೆ. ಈ ವ್ಯವಹಾರದಲ್ಲಿ ನಗದು ಹಣದ ಹಸ್ತಾಂತರ ಕಡಿಮೆಯಾಗಿ, ಬ್ಯಾಂಕುಗಳಿಗೂ ಚಿಲ್ಲರೆ ವ್ಯಾಪಾರಿಗಳಿಗೂ ಸಂಪರ್ಕ ಏರ್ಪಡುತ್ತದೆ. ಕೆಲವು ಬ್ಯಾಂಕುಗಳು ಕೃಷಿ ಸಾಮಗ್ರಿಗಳನ್ನು ಕೊಳ್ಳಲು ಕೃಷಿ ಕಾರ್ಡನ್ನು ನೀಡುತ್ತಿವೆ. ಹಾಗೆಯೇ ಬಂಗಾರದ ಕಾರ್ಡು ಸ್ವಲ್ಪ ಮಟ್ಟಿಗೆ ಬಳಕೆಯಲ್ಲಿದೆ. ಭಾರತದಲ್ಲಿ ಉದರಿ ಕಾರ್ಡಿನ ನೀಡಿಕೆ ಮತ್ತು ಬಳಕೆಗಳು ದೊಡ್ಡ ಪಟ್ಟಣಗಳಿಗೆ ಸೀಮಿತವಾಗಿದ್ದು; ಇನ್ನೂ



೨

ಪ್ರಯೋಗಾವಸ್ಥೆಯಲ್ಲಿರುವುದರಿಂದ ಬ್ಯಾಂಕುಗಳು ಏಕರೀತಿಯ ಪದ್ಧತಿಯನ್ನು ಅನುಸರಿಸುತ್ತಿಲ್ಲ.

## 2 ಖಾತಾ ನಿರ್ವಹಣೆ

ಬ್ಯಾಂಕುಗಳು ತಮ್ಮ ಗ್ರಾಹಕರ ಮತ್ತು ಸಂಸ್ಥಾ ಗ್ರಾಹಕರ ಹಣದ ಹೂಡಿಕೆಗಳನ್ನು ದಕ್ಷವಾಗಿ ನಿರ್ವಹಿಸಿ, ನಿಗದಿತ ಶುಲ್ಕವನ್ನು ಗಳಿಸುವುದಕ್ಕೆ ಖಾತಾ ನಿರ್ವಹಣೆ ಎನ್ನುವರು. ಈ ವ್ಯವಹಾರಗಳಿಂದ ಖಜಾನೆ ಹುಂಡಿಗಳಿಗೆ, ಸರ್ಕಾರಿ ಪ್ರತಿಭೂತಿಗಳಿಗೆ ಮತ್ತು ಯೂನಿಟ್ಟುಗಳಿಗೆ ದ್ವಿತೀಯಕ ಮಾರುಕಟ್ಟೆ ಸೃಷ್ಟಿಯಾಗಿದೆ. ಬ್ಯಾಂಕುಗಳು ಗ್ರಾಹಕ ಹೂಡಿಕೆದಾರರನ್ನು ಆಕರ್ಷಿಸಲು ಮರು ಖರೀದಿ ಖಾತರಿಯನ್ನು ಕೊಟ್ಟಿದ್ದರಿಂದ, ಆ ಬ್ಯಾಂಕುಗಳಲ್ಲಿ ಅಲ್ಪಕಾಲಿಕ ದ್ರವತ್ವದ ಕೊರತೆಯುಂಟಾಗಿ, ಅತಿ ಹೆಚ್ಚಿನ ದರದ ಬಡ್ಡಿಯನ್ನು ತೆತ್ತು ಅಲ್ಪಕಾಲಿಕ ಹಣವನ್ನು ಒದಗಿಸಬೇಕಾಯಿತು. ಆದ್ದರಿಂದ ರಿಸರ್ವ್ ಬ್ಯಾಂಕ್ ಖಾತಾ ನಿರ್ವಹಣೆಯ ಕಲಾಪಗಳಲ್ಲಿ ಮರುಖರೀದಿ ಖಾತರಿ ವ್ಯವಹಾರವನ್ನು ನಿರ್ಬಂಧಿಸಿದೆ.

## 3 ಉಪಕ್ರಮ ಬಂಡವಾಳ

ಆಧುನಿಕ ಮತ್ತು ವಿದ್ಯುನ್ಮಾನ ಕೈಗಾರಿಕೋದ್ಯಮಗಳ ಪ್ರವರ್ತನೆಗೆ ಸಾಮ್ಯ ಬಂಡವಾಳವನ್ನೊದಗಿಸಲು ಬ್ಯಾಂಕುಗಳು ಮತ್ತು ಬ್ಯಾಂಕೇತರ ಸಂಸ್ಥೆಗಳು ಉಪಕ್ರಮ ಬಂಡವಾಳ ಕಂಪನಿಗಳನ್ನು ಸ್ಥಾಪಿಸಿವೆ. ರಾಷ್ಟ್ರೀಕೃತ ವಾಣಿಜ್ಯ ಬ್ಯಾಂಕುಗಳು ಉಪಕ್ರಮ ಬಂಡವಾಳ ನಿಧಿಗಳ ಸಹಾಯಕ ಸಂಸ್ಥೆಗಳನ್ನು ರಚಿಸಿ ಈ ಕ್ಷೇತ್ರದಲ್ಲಿ ಕಾರ್ಯೋನ್ಮುಖವಾಗಿವೆ. ವಿಜ್ಞಾನದ ಅನ್ವೇಷಣೆಯಿಂದ ಮತ್ತು ತಾಂತ್ರಿಕತೆಯ ಬದಲಾವಣೆಯಿಂದ ಜನ್ಮತಾಳಿರುವ ಆಧುನಿಕ ಕೈಗಾರಿಕೋದ್ಯಮಗಳ ಪ್ರಾರಂಭದೆಶೆಯಲ್ಲಿರುವ ನಷ್ಟಸಂಭವಗಳನ್ನು ಎದುರಿಸಿ, ಉಪಕ್ರಮ ಬಂಡವಾಳ ಕಂಪನಿಗಳು ಸಹನೆಯಿಂದಿದ್ದು, ಆ ಉದ್ಯಮಗಳು ಮಾರುಕಟ್ಟೆಯಲ್ಲಿ ಸ್ಥಿರತೆಗಳಿಸಿದ ಅನಂತರ ಹೆಚ್ಚು ಲಾಭವನ್ನು ಗಳಿಸುವ ಪ್ರಯತ್ನದಲ್ಲಿವೆ. ಅನಿವಾಸಿ ಭಾರತೀಯರ ಹೂಡಿಕೆಗಳನ್ನು ಈ ವ್ಯವಹಾರದಲ್ಲಿ ತೊಡಗಿಸಿವೆ ಮತ್ತು ಖಾಸಗಿ ವಲಯದ ಸಂಸ್ಥೆಗಳು ವಿದೇಶಿ ಸಂಸ್ಥೆಗಳ ಜೊತೆಗೂಡಿ ಉಪಕ್ರಮ ಬಂಡವಾಳದ ಹೂಡಿಕೆಗೆ ಒಪ್ಪಂದಗಳನ್ನು ಮಾಡಿಕೊಂಡಿವೆ. ಭಾರತ ಸರ್ಕಾರ ಉಪಕ್ರಮ ಬಂಡವಾಳ ನಿಧಿಗಳಿಗೆ ಹಣಕಾಸಿನ ರಿಯಾಯಿತಿಗಳನ್ನು ಮತ್ತು ಸ್ಥಾಪನೆಗೆ ಮಾರ್ಗದರ್ಶನವನ್ನು ಕೊಟ್ಟಿದೆ. ಈ ನಿಧಿಗಳು ನೀಡುವ ಸಾಮ್ಯ ಷೇರುಗಳ ವ್ಯವಹಾರಕ್ಕಾಗಿ ದ್ವಿತೀಯಕ ಹಣಪೇಟೆಯನ್ನು ಸದ್ಯದಲ್ಲೇ ತೆರೆಯಬಹುದು. ಈ ಪೇಟೆಯಲ್ಲಿ ಉಪಕ್ರಮ ಬಂಡವಾಳ ಕಂಪನಿಗಳು ತಮ್ಮ ಹೂಡಿಕೆಗಳನ್ನು ಇತರರಿಗೆ ಮಾರಬಹುದು ಮತ್ತು ಈ ಸಹಾಯಕ ಸಂಸ್ಥೆಗಳ ವ್ಯವಹಾರವನ್ನು ದೇಶದಲ್ಲಿ ಪ್ರಾರಂಭಿಸಬಹುದು. ಈ ಕಂಪನಿಗಳ ಭವಿಷ್ಯ ನಮ್ಮ ದೇಶದ ಆರ್ಥಿಕ ಬೆಳವಣಿಗೆಯಲ್ಲಿ ಆಧುನಿಕ ಹಾಗೂ ಅಸಾಂಪ್ರದಾಯಿಕ ಕೈಗಾರಿಕೋದ್ಯಮಗಳಿಗಿರುವ ಪ್ರಾಮುಖ್ಯ ಮತ್ತು ಭವಿಷ್ಯವನ್ನು ಅವಲಂಬಿಸಿದೆ.

## 4 ವಣಿಕ ಬ್ಯಾಂಕಿಂಗ್

ಭಾರತದಲ್ಲಿ ಕೈಗಾರಿಕೋದ್ಯಮ ಮತ್ತು ಪರವಾನೆ ನೀತಿಗಳಲ್ಲಿ ಸಡಿಲಿಕೆಯಿಂದಲೂ ಬ್ಯಾಂಕಿಂಗ್ ನಿಯಂತ್ರಣ ಕಾಯಿದೆಗಳಲ್ಲಾಗಿರುವ ತಿದ್ದುಪಡಿಗಳಿಂದಲೂ ವಾಣಿಜ್ಯ ಬ್ಯಾಂಕುಗಳು ವಣಿಕ ಬ್ಯಾಂಕಿಂಗ್ ವ್ಯವಹಾರಗಳಿಗಾಗಿ ಸಹಾಯಕ ಸಂಸ್ಥೆಗಳನ್ನು ರಚಿಸಿ, ಹಣಕಾಸಿನ ಸೇವೆಗಳ ಮೂಲಕ ಲಾಭಗಳಿಕೆಯ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳಬಹುದು. ಈಗಿನ ಮಾರುಕಟ್ಟೆಯ ಹೊಸ ಪರಿಸರದಲ್ಲಿ ಕೈಗಾರಿಕೋದ್ಯಮಗಳ ವಿಸ್ತರಣೆಗೆ, ಆಧುನಿಕತೆಗೆ ಮತ್ತು ವಿವಿಧೀಕರಣಕ್ಕೆ ಯುಕ್ತವಾದ ಹಣಕಾಸಿನ ಸೇವೆಗಳನ್ನೊದಗಿಸಲು ವಣಿಕ ಬ್ಯಾಂಕಿಂಗ್ ಸಂಸ್ಥೆಗಳಿಗೆ ಒಳ್ಳೆಯ ಅವಕಾಶವಿದೆ. ವಣಿಕ ಬ್ಯಾಂಕಿಂಗ್ ಸಂಸ್ಥೆಗಳ ಮುಖ್ಯೋದ್ದೇಶಗಳು ಇವು: (i) ಖಾಸಗಿ ಅಥವಾ ಸಾರ್ವಜನಿಕ ಕಂಪನಿಯ ಪ್ರವರ್ತನೆ ಹಾಗೂ ಕಾರ್ಯನಿರ್ವಹಣೆಗೆ ಸಲಹೆ ನೀಡುವುದು ; (ii) ಕಂಪನಿಯ ಹಣದ ಆವಶ್ಯಕತೆಯನ್ನು ಪೂರೈಸಲು ಸಹಾಯ ಮಾಡುವುದು ; ಹೊಸದಾಗಿ ನೀಡಲಾದ ಷೇರುಗಳ ವಿತರಣೆ ಮಾಡುವುದು ಹಾಗೂ ಅವಕ್ಕೆ ಮಾರುಕಟ್ಟೆಯನ್ನು ಸೃಷ್ಟಿಸುವುದು ; (iii) ಕಂಪನಿಯ ಹಣ ವಿನಿಯೋಜನೆಯನ್ನು ಕುರಿತಂತೆ ಲಾಭದಾಯಕ ಸಲಹೆ ನೀಡುವುದು ಮತ್ತು ಕಾನೂನು ನೆರವು ಒದಗಿಸುವುದು ; (iv) ಕಂಪನಿಯ ಸ್ವರೂಪ ಹಾಗೂ ಆರ್ಥಿಕ ಸಂರಚನೆಯ ವಿಚಾರವಾಗಿ ಸಲಹೆಯನ್ನು ದೊರಕಿಸುವುದು ; (v) ವಿಲನಗಳು ಮತ್ತು ಸ್ವಾಧೀನಗಳು ; (vi) ಅನಿವಾಸಿ ಹೂಡಿಕೆಗಳ ನಿರ್ವಹಣೆ, ಖಾತಾ ನಿರ್ವಹಣೆ, ಇತರೆ.

ವಣಿಕ ಬ್ಯಾಂಕಿಂಗ್ ಸಂಸ್ಥೆಗಳಿಗೆ ದ್ರವತ್ವ ಮತ್ತು ಮೀಸಲುಗಳನ್ನು ಕುರಿತಾದ ಕಾನೂನುಗಳು ಅನ್ವಯಿಸುವುದಿಲ್ಲ. ಆದರೆ ಈ ಕ್ಷೇತ್ರದಲ್ಲಿ 2-3 ದಶಕಗಳಿಂದ ವ್ಯವಹರಿಸುತ್ತಿದ್ದು ಬೇರೂರಿ ನಿಂತಿರುವ ಖಾಸಗಿ ವಲಯದ ವಣಿಕ ಬ್ಯಾಂಕುಗಳಿಂದ ಪೈಪೋಟಿ ತೀವ್ರವಾಗಿದೆ. ಇಂದಿನ ಪರಿಸ್ಥಿತಿಯಲ್ಲಿ ರಾಷ್ಟ್ರೀಕೃತ ವಾಣಿಜ್ಯ ಬ್ಯಾಂಕುಗಳ ವಣಿಕ ಬ್ಯಾಂಕಿಂಗ್ ಸಹಾಯಕ ಸಂಸ್ಥೆಗಳು ತಮ್ಮ ಗಳಿಕೆಯ ವೃದ್ಧಿಗಾಗಿ ಹೂಡಿಕೆದಾರರಲ್ಲಿ ವಿಶ್ವಾಸ ಮೂಡಿಸಲು ಕೆಲವು ಕ್ರಮಗಳನ್ನು ಕೈಗೊಳ್ಳುವ ಅಗತ್ಯವಿದೆ. ಉದ್ಯಮದ ಪ್ರವರ್ತನೆಯ ಹೆಸರಿನಲ್ಲಿ ಹೂಡಿಕೆದಾರರನ್ನು ವಂಚಿಸುವವರು ಹೆಚ್ಚುತ್ತಿರುವುದರಿಂದ, ಕಂಪನಿಗಳ ಪ್ರವರ್ತನೆ ಹಾಗೂ ಆರ್ಥಿಕ ಜೀವಂತಿಕೆಯನ್ನು ಕುರಿತು ಸರಿಯಾಗಿ ವಿಶ್ಲೇಷಿಸಲು ಮತ್ತು ಕಂಪನಿಯ ಪ್ರವರ್ತಕರ, ನಿರ್ವಾಹಕರ ಕಾರ್ಯದಕ್ಷತೆ ಮತ್ತು ಸಾಮರ್ಥ್ಯಗಳನ್ನು ತಿಳಿಯಲು ಈ ಉಪಸಂಸ್ಥೆಗಳು ನುರಿತ ಸಿಬ್ಬಂದಿಗಳನ್ನು ನೇಮಿಸುವುದಲ್ಲದೆ ಸುದ್ದಿ ಸಂಗ್ರಹಣೆಗೂ ತಕ್ಕ ವ್ಯವಸ್ಥೆಗಳನ್ನು ಮಾಡಬೇಕಾಗಿದೆ.

## 5 ಪರಸ್ಪರ ನಿಧಿ

ಭಾರತ ಸರ್ಕಾರ 1986ರಲ್ಲಿ ಸರ್ಕಾರಿ ವಲಯದ ಕೆಲವು ವಾಣಿಜ್ಯ ಬ್ಯಾಂಕುಗಳಿಗೆ ಪರಸ್ಪರ ನಿಧಿಗಳನ್ನು ಆರಂಭಿಸಲು ಅನುಮತಿಯನ್ನು ನೀಡಿತು. ಎರಡು ರಾಷ್ಟ್ರೀಕೃತ ಬ್ಯಾಂಕುಗಳು ಪರಸ್ಪರ ನಿಧಿಗಳ ಸಹಾಯಕ ಸಂಸ್ಥೆಗಳನ್ನು ರಚಿಸಿ ಆ ವ್ಯವಹಾರಗಳನ್ನು ನಿಭಾಯಿಸುತ್ತಿವೆ. ಪರಸ್ಪರ ನಿಧಿ ಸಂಸ್ಥೆಗಳು ಸಣ್ಣ ಹೂಡಿಕೆದಾರರಿಂದ ಹಣವನ್ನು ಸಂಗ್ರಹಿಸಿ, ವಿವಿಧ ಸಂಸ್ಥೆಗಳ ಷೇರು, ಡಿಬೆಂಚರುಗಳಲ್ಲಿ ವಿನಿಯೋಜಿಸಿ, ಈ ಎರಡು ಗುಂಪಿನವರ ನಡುವೆ ನಿಂತು ಮಧ್ಯವರ್ತಿ ಕಾರ್ಯಗಳನ್ನು ನಿರ್ವಹಿಸುತ್ತವೆ. ಕಂಪನಿಗಳ ಸಾರ್ವಜನಿಕ ನೀಡಿಕೆಗಳಲ್ಲಿ ಒಂದಂಶ ಪರಸ್ಪರ ನಿಧಿಗಳಿಗೆ ಮೀಸಲಾಗಿರುತ್ತದೆ. ಈ ವ್ಯವಹಾರದಲ್ಲಿ ಹಣದ ಸಂಗ್ರಹಣೆ ಮೊದಲ ಹಂತವಾದರೆ ಅದರ ವಿನಿಯೋಜನೆ ಮತ್ತೊಂದು ಹಂತವಾಗಿದೆ. ಪರಸ್ಪರ ನಿಧಿ ಸಂಸ್ಥೆ ಮೊದಲಿಗೆ ವಿವಿಧ ಯೋಜನೆಗಳ ಷೇರು, ಸ್ಟಾಕುಗಳನ್ನು ಹೂಡಿಕೆದಾರರಿಗೆ ನೀಡಿ ಹಣ ಸಂಗ್ರಹಿಸುತ್ತದೆ. ನಿಧಿಯು ಕೆಲವು ಷೇರುಗಳನ್ನು ಷೇರು ಮಾರುಕಟ್ಟೆಯಲ್ಲಿ ಆ ದಿನದ ಬೆಲೆಗೆ ಮಾರಬಹುದು ಅಥವ ಕೊಳ್ಳಬಹುದು. ಮತ್ತೆ ಕೆಲವು ಷೇರುಗಳನ್ನು ಪರಸ್ಪರ ನಿಧಿಯ ಸಂಸ್ಥೆಗೇ ಆ ತಿಂಗಳ ನಿಗದಿತ ಬೆಲೆಗೆ ಮಾರಬಹುದು ಅಥವಾ ಆ ಸಂಸ್ಥೆಯಿಂದ ಕೊಳ್ಳಬಹುದು. ಪರಸ್ಪರ ನಿಧಿಯ ಷೇರುಗಳಲ್ಲಿ ಸುರಕ್ಷತೆ ಮತ್ತು ಲಾಭವಿರುವುದಲ್ಲದೆ ಶೀಘ್ರ ಮಾರಾಟ ಹಾಗೂ ವರ್ಗಾವಣೆ ಸೌಲಭ್ಯವಿದ್ದು ಹೂಡಿಕೆದಾರರಿಗೆ ವರಮಾನ ತೆರಿಗೆಯಲ್ಲಿ ವಿನಾಯಿತಿಯೂ ಇರುವುದರಿಂದ ಸಣ್ಣ ಹೂಡಿಕೆದಾರರನ್ನು ಆಕರ್ಷಿಸಿ ಷೇರು ಮಾರುಕಟ್ಟೆಯ ಬೆಳವಣಿಗೆಗೆ ಹೊಸ ಮಾರ್ಗವನ್ನು ತೆರೆದಿದೆ.

ಹೀಗೆ ಸಂಗ್ರಹಿಸಿದ ಹಣವನ್ನು ಪರಸ್ಪರ ನಿಧಿ ಸಂಸ್ಥೆ ಬೆಲೆಗಳಲ್ಲಿ ಭಾರಿ ಏರಿಳಿತವಾಗದ, ಕಾಲಕಾಲಕ್ಕೆ ಬಡ್ಡಿ ಸಿಗುವಂಥ ಹಾಗೂ ಅಪಾಯ ಕಡಿಮೆಯಾಗಿರುವ ಕಂಪನಿ ಡಿಬೆಂಚರ್ ಮತ್ತು ಸರ್ಕಾರಿ ಸ್ವಾಮ್ಯದ ಕಂಪನಿ ಬಾಂಡುಗಳಲ್ಲಿ ವಿನಿಯೋಜಿಸುತ್ತದೆ. ನಿಧಿ ತನ್ನ ವ್ಯವಹಾರಗಳ ಮೂಲಕ ಷೇರು ಮಾರುಕಟ್ಟೆಯ ದೃಢತೆಗೆ ಮುಕ್ತ ಬೆಂಬಲ ನೀಡುತ್ತಿದೆ. ಉತ್ತಮ ಭವಿಷ್ಯವಿರುವಂಥ ಕಂಪನಿಗಳ ಷೇರುಗಳನ್ನು ಖರೀದಿಸಿ ಮಾರುಕಟ್ಟೆ ಸುಸ್ಥಿತಿಯನ್ನು ತಲುಪಿದಾಗ ನಿಧಾನವಾಗಿ ಅವು ಲಾಭವನ್ನು ಗಳಿಸಲಾರಂಭಿಸಿದಂತೆಯೇ ಒಂದೊಂದಾಗಿ ಮಾರಲಾಗುವುದು. ಈ ಎಲ್ಲ ಲಾಭಾಂಶಗಳನ್ನು ಒಟ್ಟು ಸೇರಿಸಿ ಕೊನೆಗೆ ತನ್ನ ಖರ್ಚುಗಳನ್ನು ಕಳೆದು ಉಳಿದ ಲಾಭವನ್ನು ಹೂಡಿಕೆದಾರರಿಗೆ ಸಮವಾಗಿ ಹಂಚಲಾಗುವುದು. ಬಂಡವಾಳ ಮಾರುಕಟ್ಟೆಯಲ್ಲಿ ವ್ಯವಹರಿಸುವ ಎಲ್ಲ ವರ್ಗದವರಿಗೂ ಲಾಭದಾಯಕವಾಗಿರುವಂತೆ ತನ್ನ

ಕಲಾಪಗಳನ್ನು ಮುಂದುವರಿಸಿದರೆ ಪರಸ್ಪರ ನಿಧಿ ಸಂಸ್ಥೆಯ ಭವಿಷ್ಯ ಉಜ್ವಲವಾಗಬಹುದು.

## 6 ಗುತ್ತಿಗೆ ವ್ಯವಹಾರ

ಗುತ್ತಿಗೆ ವ್ಯವಹಾರವೆಂದರೆ ಒಂದು ನಿರ್ದಿಷ್ಟ ಅವಧಿಗೆ ಒಬ್ಬನ ಸ್ವತ್ತನ್ನು ಮತ್ತೊಬ್ಬ ಅನುಭವಿಸಲು ಅನುವುಮಾಡಿಕೊಂಡ ಒಪ್ಪಂದ. ಗುತ್ತಿಗೆಯ ಅವಧಿ ಮುಗಿದ ಅನಂತರ ಸ್ವತ್ತು ಮೊದಲಿನ ಮಾಲೀಕನಿಗೆ ಹಿಂದಿರುಗುತ್ತದೆ. ಗುತ್ತಿಗೆದಾರ ಅದಕ್ಕಾಗಿ ಮಾಲೀಕನಿಗೆ ನಿಯತಕಾಲಿಕವಾಗಿ ನಿಗದಿಯಾದ ಮೊಬಲಗನ್ನು ಪಾವತಿಮಾಡಬೇಕಾಗುತ್ತದೆ. ಕೆಲವು ರಾಷ್ಟ್ರೀಕೃತ ಬ್ಯಾಂಕುಗಳು ಸಹಾಯಕ ಸಂಸ್ಥೆಗಳನ್ನು ರಚಿಸಿ, ಕೈಗಾರಿಕಾ ಯಂತ್ರೋಪಕರಣಗಳು, ಕೃಷಿ ಯಂತ್ರ ಸಲಕರಣೆಗಳು, ವಾಹನಗಳು, ಕಟ್ಟಡಗಳು, ಗಣಿ ಮತ್ತು ಸೇವಾ ಸರಂಜಾಮುಗಳಲ್ಲಿ ಗುತ್ತಿಗೆ ವ್ಯವಹಾರವನ್ನು ನಡೆಸುತ್ತಿವೆ. ಇಪ್ಪತ್ತು ವರ್ಷಗಳಿಂದ ಈ ವ್ಯವಹಾರದಲ್ಲಿ ತೊಡಗಿರುವ ನೂರಾರು ಖಾಸಗಿ ಸಂಸ್ಥೆಗಳ ಪೈಪೋಟಿಯಿಂದ ಗುತ್ತಿಗೆಯ ಬಾಡಿಗೆ ದರ ಈಚೆಗೆ ಇಳಿಮುಖವಾಗಿದೆ. ಆದ್ದರಿಂದ ರಾಷ್ಟ್ರೀಕೃತ ವಾಣಿಜ್ಯ ಬ್ಯಾಂಕುಗಳು ತಮ್ಮ ಸಂಸ್ಥೆಯ ಲಾಭವನ್ನು ಹೆಚ್ಚಿಸಲು, ಗುತ್ತಿಗೆ ವ್ಯವಹಾರಕ್ಕೆ ವಿಶೇಷವಾದ ಒಂದು ಕ್ಷೇತ್ರವನ್ನು ಗುರುತಿಸಬೇಕು. ನಷ್ಟ ಸಂಭವಗಳೇ ಹೆಚ್ಚಾಗಿರುವ ಈ ವ್ಯವಹಾರದಲ್ಲಿ ದಕ್ಷ ನಿರ್ವಹಣೆಯ ಅಗತ್ಯವಿದೆ. ನಷ್ಟಗಳ ಸರಿಯಾದ ಮೌಲ್ಯಾಂಕನದ ಜೊತೆಗೆ ಯುಕ್ತ ಕ್ರಮಗಳನ್ನು ಜಾರಿಗೆ ತಂದು ಲಾಭ ನಷ್ಟಗಳನ್ನು ಸರಿದೂಗಿಸಿದರೆ ಗುತ್ತಿಗೆ ವ್ಯವಹಾರ ಬ್ಯಾಂಕುಗಳಿಗೆ ಲಾಭದಾಯಕವಾಗಬಹುದು.

## 7 ಋಣಾಭಿಕರಣ ವ್ಯವಹಾರ

ಅಭಿಕರ್ತೃವಿನ ಸೇವೆಗಳ ಮೂಲಕ ಸಣ್ಣ ಉದ್ದಿಮೆಗಳಿಗೆ, ಗೌಣ ಕೈಗಾರಿಕೆಗಳಿಗೆ ಮತ್ತು ರಫ್ತು ವ್ಯಾಪಾರಿಗಳಿಗೆ ನೆರವು ನೀಡಲು ರಾಷ್ಟ್ರೀಕೃತ ವಾಣಿಜ್ಯ ಬ್ಯಾಂಕುಗಳು ಋಣಾಭಿಕರಣ ವ್ಯವಹಾರಕ್ಕಾಗಿ ಸಹಾಯಕ ಸಂಸ್ಥೆಗಳನ್ನು ರಚಿಸಿವೆ. ಈ ವ್ಯವಹಾರದಲ್ಲಿ ಸಂಸ್ಥೆ ತನ್ನ ಗ್ರಾಹಕನ ಋಣಗಳ ವಸೂಲಿ ಜವಾಬ್ದಾರಿಯನ್ನು ವಹಿಸುವುದಲ್ಲದೆ ಗ್ರಾಹಕನ ಪ್ರಾಪ್ಯ ಹುಂಡಿಗಳನ್ನಾಧರಿಸಿ ಹಣವನ್ನು ಒದಗಿಸುತ್ತದೆ. ಈ ವ್ಯವಹಾರದಲ್ಲಿ ಸಂಸ್ಥೆ ಗ್ರಾಹಕನ ವಸೂಲಾಗುವಂತಹ ಪುಸ್ತಕ ಋಣಗಳನ್ನು ಕೊಳ್ಳುತ್ತದೆಂದು ಹೇಳಬಹುದು. ವಸೂಲಿ ಮಾಡುವ ಹುಂಡಿಗಳ ಮೊತ್ತದಿಂದ ವಟ್ಟವನ್ನು ಕಳೆದು ಅದನ್ನೇ ಅಭಿಕರಣ ಸೇವಾಶುಲ್ಕವಾಗಿ ಗಳಿಸುತ್ತದೆ. ಈ ಸಂಸ್ಥೆಯ ಗ್ರಾಹಕರು ಸಾಲದ ವಸೂಲಿಗಾಗಿ ಸಾಲಗಾರರ ಬೆನ್ನಟ್ಟಿ ಹೋಗಬೇಕಾಗಿಲ್ಲ ಮತ್ತು ಇದಕ್ಕೆ ಹೆಚ್ಚಿಗೆ ಖರ್ಚು ಮಾಡಬೇಕಾಗಿಲ್ಲ. ಈ ವ್ಯವಹಾರದಲ್ಲಿ ಲಾಭಗಳಿಸಲು ಸಂಸ್ಥೆ ಉತ್ತಮವಾದ ಸುದ್ದಿ–ಸಂಗ್ರಹಣಾ ಜಾಲವನ್ನು ಹೊಂದಿರಲೇ ಬೇಕು. ಹಾಗಾದರೆ ನಷ್ಟ ಸಂಭವಗಳ ದಕ್ಷ ನಿರ್ವಹಣೆ ಸಾಧ್ಯವಾಗುತ್ತದೆ. ಋಣಾಭಿಕರಣ ವ್ಯವಹಾರ ಸಂಸ್ಥೆಗಳಿಂದ ಪೂರ್ಣವಾಗಿ ಪ್ರಯೋಜನ ಪಡೆಯಲು, ಈ ಸೇವೆಗಳಿಗೆ ಅನ್ವಯಿಸುವ ನಿಯಮ ನಿಬಂಧನೆಗಳ ತಿದ್ದುಪಡಿಯ ಮೂಲಕ ಅಭಿಕರ್ತೃ ತನ್ನ ಹೆಸರಿನಲ್ಲೆ ಋಣ ವಸೂಲಿ ಮಾಡುವ ಹಕ್ಕನ್ನು ಕೊಟ್ಟರೆ, ಕರಡು ಋಣಗಳು ಕಡಿಮೆಯಾಗಬಹುದು ಮತ್ತು ಋಣಗಳ ಶೀಘ್ರ ವಸೂಲಿಗಾಗಿ ಯುಕ್ತ ಕ್ರಮಗಳನ್ನು ಅನುಸರಿಸಬಹುದು.

## ಗೃಹನಿರ್ಮಾಣ ಹಣಕಾಸು

ಗೃಹನಿರ್ಮಾಣ ಕಾರ್ಯಗಳಿಗಿದ್ದ ಉದರಿ ಕೊರತೆಯನ್ನು ನೀಗಿಸಲು ರಾಷ್ಟ್ರೀಯ ಗೃಹ ನಿರ್ಮಾಣ ಬ್ಯಾಂಕ್ ಸ್ಥಾಪಿಸಿದ ಅನಂತರ ರಾಷ್ಟ್ರೀಕೃತ ಬ್ಯಾಂಕುಗಳು ಗೃಹನಿರ್ಮಾಣ ವ್ಯವಹಾರಕ್ಕಾಗಿ ಸಹಾಯಕ ಸಂಸ್ಥೆಗಳನ್ನು ರಚಿಸಿವೆ. ಈ ಸಂಸ್ಥೆಗಳು ಮಧ್ಯಮ ವರ್ಗದವರಿಗೆ ಮತ್ತು ಕೆಳವರ್ಗದವರಿಗೆ ಗೃಹನಿರ್ಮಾಣ/ಖರೀದಿಗಾಗಿ ಉದರಿ ಸೌಲಭ್ಯ ನೀಡುತ್ತವೆ. ಈ ಯೋಜನೆಯ ಪ್ರಕಾರ ಗೃಹದ ಮಾಲೀಕರಾಗಬಯಸುವವರು ಮೊದಲು ತಮ್ಮ ಹೆಸರಿನಲ್ಲಿ ಉಳಿತಾಯ ಖಾತೆಯನ್ನು ತೆರೆದು, ನಿಗದಿತ ಮೊತ್ತವನ್ನು ಪ್ರತಿ ತಿಂಗಳೂ ಆ ಖಾತೆಗೆ ಜಮಾ ಮಾಡಬೇಕು. ಹೀಗೆ ಐದು ವರ್ಷಗಳು ಸಂದಮೇಲೆ ಜಮಾ ಆಗಿರುವ ಮೊತ್ತವನ್ನಾಧರಿಸಿ ಅದರ 2.5ರಷ್ಟು, ಗರಿಷ್ಠ ಮಿತಿಯಾದ ರೂ. 5 ಲಕ್ಷದ ವರೆಗೆ, ಗೃಹ ನಿರ್ಮಾಣ/ಖರೀದಿಗಾಗಿ ಉದರಿಯನ್ನು ಪಡೆಯಬಹುದು. ಈ ಸಾಲವನ್ನು ದೀರ್ಘಾವಧಿಯಲ್ಲಿ (15 ವರ್ಷಗಳಲ್ಲಿ) ಮಾಸಿಕ ಕಂತುಗಳಾಗಿ ತೀರಿಸಬಹುದು. ಈ ಯೋಜನೆಯ ಅಡಿಯಲ್ಲಿ ಹಣ ಉಳಿತಾಯ ಮಾಡುವವರಿಗೂ, ಸಾಲ ತೀರಿಸುವವರಿಗೂ ಭಾರತ ಸರ್ಕಾರ ವರಮಾನ ತೆರಿಗೆ ವಿನಾಯಿತಿ ನೀಡುತ್ತದೆ. ರಾಷ್ಟ್ರೀಕೃತ ವಾಣಿಜ್ಯ ಬ್ಯಾಂಕುಗಳ ಸಹಾಯಕಸಂಸ್ಥೆಗಳು ಈ ಕ್ಷೇತ್ರದಲ್ಲಿ ಲಾಭಗಳಿಸಲು ಮಾಡಬೇಕಾದ ಕೆಲಸಗಳು ಬಹಳ ಇವೆ. ಮೊದಲು ದೇಶದ ಜನತೆಗೆ ಅಗತ್ಯವಾಗಿರುವ ನಿವಾಸಗೃಹಗಳ ಅಂದಾಜಿರಬೇಕು. ವಿವಿಧ ವರ್ಗಗಳ ಜನರ ವಾಸಕ್ಕೆ ಯೋಗ್ಯವಾದ ಗೃಹಗಳನ್ನು ತಜ್ಞರ ಸಹಾಯದಿಂದ ಯೋಜಿಸಬೇಕು. ಹೀಗೆ ಯೋಜಿಸಿದ ಗೃಹಗಳ ಕಟ್ಟಡಗಳು ಸುದೃಢವಾಗಿರಲು ಗೃಹ ನಿರ್ಮಾಣದಲ್ಲಿ ನಿಪುಣತೆ ಇರುವವರನ್ನು ಮತ್ತು ನುರಿತವರನ್ನು ನೇಮಿಸಿಕೊಳ್ಳಬೇಕು. ಹೀಗೆ ನಿರ್ಮಿಸಿದ ಗೃಹಗಳು ಅನುಭೋಗಿಗಳ ಕೊಳ್ಳುವ ಸಾಮರ್ಥ್ಯಕ್ಕೆ ತಕ್ಕಂತೆ ಇರಬೇಕು. ವ್ಯವಸ್ಥಿತ ರೀತಿಯಲ್ಲಿ ಇವೆಲ್ಲವನ್ನು ಸಂಘಟಿಸಿದರೆ, ಈ ಸಂಸ್ಥೆಗಳು ದೀರ್ಘಾವಧಿಯ ಲಾಭವನ್ನು ಗಳಿಸಬಹುದು. ದೇಶದಲ್ಲಿ ವಸತಿಗೃಹಗಳ ಕೊರತೆಯನ್ನು ತೀರಿಸಲು, ಜನತೆಗೆ ಸಾಮಾಜಿಕ ನ್ಯಾಯ ಹಾಗೂ ಸಮಾನತೆಯನ್ನು ಒದಗಿಸಲು ರಾಷ್ಟ್ರೀಕೃತ ವಾಣಿಜ್ಯ ಬ್ಯಾಂಕುಗಳ ಗೃಹನಿರ್ಮಾಣ ಸಂಸ್ಥೆಗಳಿಗೆ ಪ್ರೋತ್ಸಾಹ ಸಿಗುತ್ತದೆ.

## ಬದಲಾವಣೆಗಳು

ಇವೆಲ್ಲ ಕಲಾಪಗಳ ಪರಿಣಾಮವಾಗಿ ಈ ಬದಲಾವಣೆಗಳನ್ನು ನಾವು ಕಾಣಬಹುದು : i ಸಮಾಜದ ಎಲ್ಲ ವರ್ಗದವರಿಗೂ ಬ್ಯಾಂಕಿನ ಉದರಿ ಮತ್ತು ಸೇವಾ ಸೌಲಭ್ಯ ಸಿಗುತ್ತದೆ. ii ಬ್ಯಾಂಕ್ ಗ್ರಾಹಕರ ಸ್ಥಿತಿ, ಸಾಮರ್ಥ್ಯ ಮತ್ತು ಆಸಕ್ತಿಗಳಿಗೆ ತಕ್ಕಂತೆ ಬ್ಯಾಂಕ್ ಉದರಿ ಮತ್ತು ಸೇವೆಗಳನ್ನು ಪರಿಚಯಿಸಿದೆ; ಹಾಗೂ ಗ್ರಾಹಕರನ್ನು ವಿವಿಧ ಗುಂಪುಗಳಾಗಿ ವಿಂಗಡಿಸಿ ಆಯಾ ಸಂಸ್ಥೆಗಳ ಮೂಲಕ ಅವರ ಅವಶ್ಯಕತೆಗಳನ್ನೊದಗಿಸುತ್ತಿದೆ. iii ಠೇವಣಿ ಸಂಗ್ರಹಣೆಯ ವಿವಿಧ ಯೋಜನೆಗಳ ಜೊತೆಗೆ ಸಾಲಸೌಲಭ್ಯಗಳನ್ನು ನೀಡುತ್ತಿದೆ. iv ಬ್ಯಾಂಕಿನ ಗ್ರಾಹಕ ಸಾಲಗಾರರನ್ನು ಮತ್ತು ಗ್ರಾಹಕ ಹೂಡಿಕೆದಾರರನ್ನು ಬೇರ್ಪಡಿಸಿ ಅವರಿಗೆ ತಕ್ಕಂತೆ ಸೇವೆ ಸಲ್ಲಿಸಿ ಶುಲ್ಕವನ್ನು ಗಳಿಸುತ್ತದೆ. v ಬ್ಯಾಂಕಿನ ವಿಶೇಷ ಸೇವೆಗಳಿಗಾಗಿ ಸಹಾಯಕ ಸಂಸ್ಥೆಗಳನ್ನು ರಚಿಸಿರುವುದರಿಂದ ಒಂದು ಕ್ಷೇತ್ರದ ಲಾಭ/ನಷ್ಟವನ್ನು ಬೇರೆ ಕ್ಷೇತ್ರಕ್ಕೆ ವರ್ಗಾಯಿಸಲು ಸಾಧ್ಯವಿಲ್ಲ ಮತ್ತು ಪ್ರತಿ ಸಂಸ್ಥೆಯ ಸಾಮರ್ಥ್ಯ ಮತ್ತು ದಕ್ಷತೆ ಹಾಗೂ ಆರ್ಥಿಕ ಜೀವಂತಿಕೆಯನ್ನು ತಿಳಿಯಬಹುದು.

ಭಾರತದ ರಾಷ್ಟ್ರೀಕೃತ ಬ್ಯಾಂಕುಗಳು ಹಲವಾರು ಯೋಜನೆಗಳ ಮೂಲಕ ಠೇವಣಿಗಳನ್ನು ಸಂಗ್ರಹಿಸಿ, ಹಣಕಾಸಿನ ಸೇವೆಗಳಲ್ಲಿ ವಿಶೇಷವಾಗಿ ಆಸಕ್ತಿ ತಳೆದು ಹಲವು ಉಪಸಂಸ್ಥೆಗಳನ್ನು ರಚಿಸಿ, ಲಾಭಗಳಿಕೆಯನ್ನು ಹೆಚ್ಚಿಸಲು ನವೋನ್ಮೇಷ ಬ್ಯಾಂಕ್ ವ್ಯವಹಾರಗಳಲ್ಲಿ ತೊಡಗಿರುವುದು ಶ್ಲಾಘನೀಯವಾಗಿದೆ. ಬ್ಯಾಂಕುಗಳಿಂದ ಬಹುಮುಖಿ ಸೇವೆಗಳನ್ನೋ ಸಲಹೆಗಳನ್ನೋ ಉದರಿ ಸೌಲಭ್ಯಗಳನ್ನೋ ಪಡೆಯಲು ಕಾತರಿಸಿ ಕಾದುನಿಂತಿರುವ ಗ್ರಾಹಕರ ಸಂಖ್ಯೆ ದಿನೇ ದಿನೇ ಬೆಳೆಯುತ್ತಿದೆ. ನಮ್ಮ ರಾಷ್ಟ್ರದ ಹಾಗೂ ಅಂತರರಾಷ್ಟ್ರೀಯ ಹಣಕಾಸಿನ ಕಾನೂನು ಮತ್ತು ನಿಯಮ ನಿಬಂಧನೆಗಳ ಪಾಲನೆಗಾಗಿ ಕಂಕಣ ತೊಟ್ಟಿರುವ ಭಾರಿ ವಾಣಿಜ್ಯ ಬ್ಯಾಂಕುಗಳಿಗೆ ಮತ್ತೆಷ್ಟು ಮುಖಗಳು ಉದ್ಭವಿಸುವುವೋ ಕಾದು ನೋಡಬೇಕು.

ಪ್ರಪಂಚದ ಇತರ ದೇಶಗಳಂತೆಯೇ ಭಾರತದ ಬ್ಯಾಂಕುಗಳ ವ್ಯವಹಾರಗಳಲ್ಲಿ ಬದಲಾವಣೆಗಳಾಗುತ್ತಿವೆ. ಬಹಳ ಹಿಂದೆಯೇ ಈ ವ್ಯವಹಾರಗಳಲ್ಲಿ ಕೈ ಸುಟ್ಟುಕೊಂಡಿರುವ ವಿದೇಶಿ ಬ್ಯಾಂಕುಗಳ ಮತ್ತಿತರ ಸಂಸ್ಥೆಗಳ ಅನುಭವಗಳನ್ನು ನಮ್ಮ ಬ್ಯಾಂಕುಗಳ ಸಹಾಯಕ ಸಂಸ್ಥೆಗಳು ಮರೆಯಬಾರದು. ಅಂತಹ ಸನ್ನಿವೇಶಗಳು ಉದ್ಭವಿಸದಿರಲು, ಬ್ಯಾಂಕಿನ ಸಂಸ್ಥೆಗಳ ವ್ಯವಹಾರಗಳಿಗೆ ಅನ್ವಯಿಸುವ ನಿಯಮ ನಿಬಂಧನೆಗಳ ತಿದ್ದುಪಡಿ

[8ನೇ ಪುಟ ನೋಡಿ]

# ಜಿಲ್ಲೆಗೊಂದು ನಬಾರ್ಡ್ ಕಛೇರಿ

**ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಸಾಧಿಸಲು ರಾಷ್ಟ್ರಮಟ್ಟದಲ್ಲಿ ಸ್ಥಾಪಿತವಾದ ಬ್ಯಾಂಕು ಸಂಕ್ಷೇಪವಾಗಿ ನಬಾರ್ಡ್ ಎಂದು ಪ್ರಸಿದ್ಧವಾಗಿದೆ. ಅಭಿವೃದ್ಧಿಗಾಗಿ ನೆರವು ನೀಡುವ ಬ್ಯಾಂಕುಗಳಿಗೆ ಪುನರ್ಧನ ಸೌಲಭ್ಯ ಒದಗಿಸುವ ಈ ಬ್ಯಾಂಕಿನ ಶಾಖೆಗಳು ಇದುವರೆಗೂ ರಾಜ್ಯಮಟ್ಟದಲ್ಲಿದ್ದುವು. ಇದೀಗ ಅವು ಜಿಲ್ಲಾ ಕೇಂದ್ರಗಳಿಗೂ ಬಿಜಯಮಾಡುತ್ತಿವೆ. ಜಿಲ್ಲಾ ಮಟ್ಟದಲ್ಲಿ ಕಾರ್ಯನಿರ್ವಹಿಸುವ ಅಗ್ರ ಬ್ಯಾಂಕುಗಳಿಗೆ ಈ ಶಾಖೆಗಳು ಒತ್ತಾಸೆ ನೀಡುತ್ತವೆ, ಕೊರತೆಯ ಸ್ಥಾನ ತುಂಬುತ್ತವೆ, ಕಣ್ಣಾವಲಾಗಿ ಕೆಲಸ ಮಾಡುತ್ತವೆ.**

ಹೇಮಚಂದ್ರ
ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್
ರಾಯಚೂರು

ತಮತಮಗೆ ಸಂಬಂಧಿಸಿದ ಕ್ಷೇತ್ರಗಳ ಹಣಕಾಸು, ಮಾರುಕಟ್ಟೆ, ಕಚ್ಚಾ ಸಾಮಗ್ರಿಯ ಪೂರೈಕೆ ಮುಂತಾಗಿ ಎಲ್ಲ ಅಂಶಗಳನ್ನು ಗಮನದಲ್ಲಿರಿಸಿ. ಅವುಗಳ ಬೆಳವಣಿಗೆಗಾಗಿ ಶ್ರಮಿಸುತ್ತಿವೆ. ಹೀಗೆಯೇ ಗ್ರಾಮೀಣ ಅಭಿವೃದ್ಧಿಗಾಗಿ 1982ರ ಜುಲೈನಲ್ಲಿ ಸರ್ಕಾರ ನಬಾರ್ಡ್ ಅನ್ನು (ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು) ರಚಿಸಿತು. ಗ್ರಾಮೀಣ ಪ್ರದೇಶದ ಅಭಿವೃದ್ಧಿಗಾಗಿ ಶೃಂಗ ಸಂಸ್ಥೆಯಾಗಿ ರಚಿತಗೊಂಡ ಈ ಬ್ಯಾಂಕು ಈಗ ರಾಜ್ಯಮಟ್ಟದಲ್ಲಿ ತನ್ನ ಶಾಖೆಗಳನ್ನು ಹೊಂದಿದೆ.

ಭಾರತದ ಗ್ರಾಮೀಣ ಪ್ರದೇಶದ ಅಭಿವೃದ್ಧಿಯನ್ನು ಗಮನದಲ್ಲಿರಿಸಿಕೊಂಡ ಬ್ಯಾಂಕುಗಳನ್ನು ಎರಡು ಭಾಗಗಳಾಗಿ ಮಾಡಬಹುದು : (1) ಕೇಂದ್ರೀಯ ಬ್ಯಾಂಕ್ ಆಗಿ ರಚಿತಗೊಂಡಿರುವ ನಬಾರ್ಡ್ ಹಾಗೂ (2) ಸೇವಾಕ್ಷೇತ್ರ ಅಭಿಗಮನವನ್ನು ಜಾರಿಗೆ ತರುತ್ತಿರುವ ವಾಣಿಜ್ಯ ಹಾಗೂ ಗ್ರಾಮೀಣ ಬ್ಯಾಂಕುಗಳ ಶಾಖೆಗಳು. ಎರಡರ ಗುರಿಯೂ ಮುಖ್ಯವಾಗಿ ಗ್ರಾಮೀಣ ಪ್ರದೇಶದ ಅಭಿವೃದ್ಧಿಯ ಮೂಲಕ ದೇಶದ ಅಭಿವೃದ್ಧಿ ಆಗಿದೆ. ವಾಣಿಜ್ಯ ಬ್ಯಾಂಕುಗಳು ಹಾಗೂ ನಬಾರ್ಡ್ ನಡುವಿನ ಪರಸ್ಪರ ಸಂಬಂಧ ಯಾವ ರೀತಿಯದಾಗಿರಬೇಕು ? ಹಾಗೂ ಗ್ರಾಮೀಣ ಪ್ರದೇಶದ ಅಭಿವೃದ್ಧಿಗಾಗಿರುವ ಬ್ಯಾಂಕೇತರ ಸಂಸ್ಥೆಗಳ ಪಾತ್ರವೇನು? ಇವೆಲ್ಲ ನಮ್ಮ ಮುಂದಿರುವ ಪ್ರಶ್ನೆಗಳು.

ನಮಗೆ ಈಗಾಗಲೇ ತಿಳಿದಿರುವಂತೆ ಏಪ್ರಿಲ್ 1, 1989ರಿಂದ 'ಸೇವಾಕ್ಷೇತ್ರ ಅಭಿಗಮನ' ಜಾರಿಯಲ್ಲಿದೆ. ಬ್ಯಾಂಕ್ ಶಾಖೆಗಳು ತಮತಮಗೆ ವಹಿಸಿಕೊಟ್ಟ ಕ್ಷೇತ್ರಗಳ ಸಾಮಾಜಿಕ–ಆರ್ಥಿಕ ಸರ್ವೇಕ್ಷಣೆ ನಡೆಸಿ, ಅಂಕಿ-ಅಂಶಗಳನ್ನು ಕ್ರೋಢೀಕರಿಸಿ, ಆಯಾ ಕ್ಷೇತ್ರಗಳ ಬೆಳವಣಿಗೆಗೆ ಬೇಕಾಗುವ ಉದರಿ ಯೋಜನೆಗಳನ್ನು ಜಾರಿಗೆ ತಂದಿವೆ. ವಾಣಿಜ್ಯ ಬ್ಯಾಂಕುಗಳು ಈ ಕ್ರಿಯೆಯಲ್ಲಿ ಪ್ರಪ್ರಥಮವಾಗಿ ತಮ್ಮನ್ನು ತಾವು ತೊಡಗಿಸಿಕೊಂಡಿರುವುದರಿಂದ ಕೆಲವು ಹಂತಗಳಲ್ಲಿ ಸಣ್ಣ ಪುಟ್ಟ ದೋಷಗಳು ಇರಬಹುದು. ಅವುಗಳಲ್ಲಿ ಮುಖ್ಯವಾಗಿ ಬ್ಯಾಂಕುಗಳು ಕ್ರೋಢೀಕರಿಸಿದ ಅಂಕಿಅಂಶಗಳ ಪ್ರಮಾಣೀಕರಣ ಹಾಗೂ ಈ ಅಂಕಿ-ಅಂಶಗಳನ್ನು ಉದರಿ ಯೋಜನೆಗೆ ಪರಿವರ್ತಿಸುವಲ್ಲಿ ಆದ ಕೆಲವು ಕೊರತೆಗಳು. ಇದಕ್ಕೆಲ್ಲ ಅನುಭವ ಮುಖ್ಯ. ಇದೆಲ್ಲವನ್ನೂ ಗಮನದಲ್ಲಿರಿಸಿಕೊಂಡು ಭಾರತೀಯ ರಿಸರ್ವ್ ಬ್ಯಾಂಕು, ನಬಾರ್ಡ್ ಜೊತೆ ಸಮಾಲೋಚಿಸಿ, ಜಿಲ್ಲಾಮಟ್ಟದಲ್ಲಿ, ಮುಖ್ಯವಾಗಿ ಗ್ರಾಮೀಣಪ್ರದೇಶದಲ್ಲಿ, ಬ್ಯಾಂಕುಗಳ ಉದರಿ ನಿರ್ವಹಣೆಯ ಉಸ್ತುವಾರಿಗಾಗಿ ಹಾಗೂ ಮಾರ್ಗದರ್ಶನಕ್ಕಾಗಿ ಜಿಲ್ಲಾ ಮಟ್ಟದಲ್ಲಿ ನಬಾರ್ಡ್ ಶಾಖೆಗಳನ್ನು ತೆರೆಯಲು ಯೋಚಿಸಿದೆ. ಇನ್ನು ನಾಲ್ಕೈದು ವರ್ಷಗಳಲ್ಲಿ ನಬಾರ್ಡ್ ದೇಶದ ಎಲ್ಲ ಜಿಲ್ಲೆಗಳಲ್ಲೂ ತನ್ನ ಶಾಖೆಗಳನ್ನು ಪಡೆಯಲಿದೆ. ಈಗಾಗಲೇ ಜಿಲ್ಲೆಗೊಂದು ಅಗ್ರ ಬ್ಯಾಂಕ್ ಇದ್ದು, ಅಗ್ರ ಬ್ಯಾಂಕ್ ಅಧಿಕಾರಿಗೆ ಗ್ರಾಮೀಣ ಹಾಗೂ ನಗರ ವಲಯದ ಅಂಕಿ-ಅಂಶಗಳ ಕ್ರೋಢೀಕರಣ ಹಾಗೂ ಯೋಜನೆಗಳ ರೂಪಣೆ, ಜಿಲ್ಲಾ ಅಧಿಕಾರಿಗಳ ಜೊತೆ ನಿಯತ ಸಂಪರ್ಕ ಇವುಗಳ ಕಾರ್ಯಭಾರ ತೀರಾ ಹೆಚ್ಚಾಗಿದ್ದು, ನಬಾರ್ಡ್‌ನ ಜಿಲ್ಲಾ ಕಛೇರಿ ಗ್ರಾಮೀಣ ವಲಯವನ್ನು ನೋಡಿಕೊಳ್ಳುವದರಿಂದ ಅಗ್ರ ಬ್ಯಾಂಕ್ ಕೆಲಸದ ಒತ್ತಡ ಕಡಿಮೆ ಆಗಬಹುದೇನೋ.

## ಉದ್ದೇಶ

ಜಿಲ್ಲೆಯಲ್ಲಿ ನ ಬಾ ರ್ಡ್ ಸ್ಥಾಪಿಸುವುದರ ಉದ್ದೇಶಗಳಿವು :

1 ಜಿಲ್ಲೆಯಲ್ಲಿ ಸಂಶೋಧನೆಯ ಪ್ರಾಥಮಿಕ ಅಧಿಕರಣವಾಗಿರುವದು.
2 ನಬಾರ್ಡ್‌ನ ತಾಂತ್ರಿಕ ತಜ್ಞರು ಜಿಲ್ಲೆಯ ಸಾಮಾಜಿಕ ಆರ್ಥಿಕ ಸ್ಥಿತಿಗತಿ ಅಥವಾ

---

ಭಾರತದ ಬ್ಯಾಂಕಿಂಗ್ ಇತಿಹಾಸದಲ್ಲಿ 1969ರ ಬ್ಯಾಂಕ್ ರಾಷ್ಟ್ರೀಕರಣ ಹಾಗೂ 1989 ಏಪ್ರಿಲ್ 1ರಿಂದ ಜಾರಿಗೆ ಬಂದ ಸೇವಾಕ್ಷೇತ್ರ ಅಭಿಗಮನ ಎರಡು ಪ್ರಮುಖಘಟನೆಗಳು. ಬ್ಯಾಂಕ್‌ರಾಷ್ಟ್ರೀಕರಣ ಬ್ಯಾಂಕಿಂಗ್ ಸೇವೆಯನ್ನು ದೇಶದ ಉದ್ದಗಲಕ್ಕೂ ವಿಸ್ತರಿಸಿದರೆ, ಸೇವಾಕ್ಷೇತ್ರ ಅಭಿಗಮನ ದೇಶದ ಗ್ರಾಮೀಣ ಪ್ರದೇಶದ ಸರ್ವಾಂಗೀಣ ಬೆಳವಣಿಗೆಗೆ ನಾಂದಿ ಹಾಡಿದೆ. 1969ರಿಂದ 1989ರ ವರೆಗಿನ ಎರಡು ದಶಕಗಳಲ್ಲಿ ಸಾಂಪ್ರದಾಯಿಕ ಬ್ಯಾಂಕಿಂಗ್ ಹೊರತಾಗಿ ಕೈಗಾರಿಕೆ, ಆಮದು–ರಫ್ತು, ಕೃಷಿ ಹೀಗೆ ವಿಶಿಷ್ಟ ಕ್ಷೇತ್ರಗಳಿಗೆ ಮೀಸಲಾದ ಕೇಂದ್ರೀಯ ಬ್ಯಾಂಕುಗಳು ರೂಪುಗೊಂಡವು. ಈ ಬ್ಯಾಂಕುಗಳು

## ಬ್ಯಾಂಕಿಂಗ್ : ಹೊಸ ಅಲೆ

[7ನೇ ಪುಟದಿಂದ ಮುಂದುವರಿದುದು]

ಗಳಿಗೂ ಭಾರತೀಯ ರಿಸರ್ವ್ ಬ್ಯಾಂಕಿನ ಸಮಯೋಚಿತ ಮಾರ್ಗದರ್ಶನಗಳಿಗೂ ಪ್ರಾಮುಖ್ಯವನ್ನು ಕೊಡಬೇಕು. ಭಾರತದ ಆರ್ಥಿಕ ಸ್ಥಿತಿ, ಸಾಮಾಜಿಕ ಸಮಸ್ಯೆಗಳು, ಸಂಪನ್ಮೂಲಗಳು ಹಾಗೂ ಜನಶಕ್ತಿಗಳನ್ನು ಗಣನೆಗೆ ತೆಗೆದುಕೊಂಡು, ದೇಶದ ಸರ್ವತೋಮುಖ ಅಭಿವೃದ್ಧಿಗಾಗಿ ಹಣಕಾಸಿನ ಸೇವೆ ಮತ್ತು ಉದರಿ ಸೌಲಭ್ಯಗಳನ್ನು ಒದಗಿಸಬೇಕು. ಸಂಸ್ಥೆಗಳ ಸುದೃಢ ಸಂಘಟನೆ, ದಕ್ಷ ನಿರ್ವಹಣೆ, ಯಂತ್ರೋಪಕರಣಗಳ ಬಳಕೆ, ವೆಚ್ಚಗಳ ನಿಯಂತ್ರಣ, ನಷ್ಟ ಸಂಭವಗಳ ವಿಶ್ಲೇಷಣೆ ಹಾಗೂ ನಿರ್ವಹಣೆ, ಸುದ್ದಿ ಸಂಗ್ರಹಣೆ, ತಜ್ಞರ ನೆರವು, ಸಿಬ್ಬಂದಿಗಳಿಗೆ ತರಬೇತಿ, ಗ್ರಾಹಕರಿಗೆ ತೃಪ್ತಿಕರವಾದ ಸೇವೆಗಳು, ಹೊಸ ಜವಾಬ್ದಾರಿಗಳಿಗೆ ತಕ್ಕ ಅಧೋರಚನೆ ಮತ್ತು ಮಾರುಕಟ್ಟೆಯಲ್ಲಿ ಸದವಕಾಶಗಳನ್ನು ಕಲ್ಪಿಸುವ ಸಾಮರ್ಥ್ಯವಿದ್ದರೆ ರಾಷ್ಟ್ರೀಕೃತ ವಾಣಿಜ್ಯ ಬ್ಯಾಂಕುಗಳ ಲಾಭಾನ್ವೇಷಣೆಯ ಪ್ರಯತ್ನಗಳು ಭವಿಷ್ಯದಲ್ಲಿ ಫಲಕಾರಿಯಾಗುವುವು. ●

ಅಧೋರಚನೆಯನ್ನು ಅನುಲಕ್ಷಿಸಿ ಭವ ಸಾಮರ್ಥ್ಯ ಆಧಾರಿತ ಉದರಿಯೋಜನೆಯನ್ನು ರೂಪಿಸುತ್ತಾರೆ.

(3) ಜಿಲ್ಲಾಮಟ್ಟದ ಅಭಿವೃದ್ಧಿ ಅಧಿಕಾರಿಗಳ ಜೊತೆ ನಿಯತವಾಗಿ ಸಮಾಲೋಚನೆ.

(4) 'ಸೇವಾಕ್ಷೇತ್ರ ಅಭಿಗಮನ'ದ ಬೆಳವಣಿಗೆಯ ಮೇಲ್ವಿಚಾರಣೆ ಮತ್ತು ಮಾರ್ಗದರ್ಶನ.

ನಬಾರ್ಡ್‌ನ ಶಾಖೆಗಳು ಜಿಲ್ಲೆಗಳಲ್ಲಿ ಕಾರ್ಯ ನಿರ್ವಹಿಸಲು ಪ್ರಾರಂಭಿಸಿದಾಗ ಆಯಾ ಜಿಲ್ಲೆಗಳಿಗೆ ಭಾರತೀಯ ರಿಸರ್ವ್ ಬ್ಯಾಂಕಿನ ಪ್ರತಿನಿಯುಕ್ತಿಗೊಂಡ ಅಗ್ರ ಬ್ಯಾಂಕ್ ಅಧಿಕಾರಿಗಳನ್ನು ವಾಪಸ್ ಪಡೆಯಲಾಗುವುದು.

### ನಬಾರ್ಡ್‌ನ ಜಿಲ್ಲಾ ಕೇಂದ್ರ ಹಾಗೂ ಅಗ್ರ ಬ್ಯಾಂಕ್

ನಬಾರ್ಡ್‌ನ ಜಿಲ್ಲಾ ಕೇಂದ್ರ ಜಿಲ್ಲೆಯಲ್ಲಿ ಗ್ರಾಮೀಣ ಅಭಿವೃದ್ಧಿಗಾಗಿ ಯೋಜಿಸಿರುವ ಎಲ್ಲ ಸಂಸ್ಥೆಗಳ ಹಾಗೂ ಅವುಗಳ ಯೋಜನೆಗಳನ್ನು ಸಂಯೋಜಿಸುವ ಪ್ರಮುಖ ಸಂಸ್ಥೆ. ಅಗ್ರ ಬ್ಯಾಂಕ್ ಅಧಿಕಾರಿ ನಬಾರ್ಡ್‌ನ ಜೊತೆಜೊತೆಗೆ ಕಾರ್ಯ ನಿರ್ವಹಿಸಬೇಕು.

### ಅಂಕಿ-ಅಂಶ ಸಂಗ್ರಹ

ನಬಾರ್ಡ್ ಜಿಲ್ಲೆಯ ಸಾಮಾಜಿಕ ಆರ್ಥಿಕ ಕೃಷಿಕ ಸ್ಥಿತಿಗತಿಗಳನ್ನು ಅನುಲಕ್ಷಿಸಿ, ಜಿಲ್ಲೆಯ ಉದರಿ ಯೋಜನೆಯನ್ನು ರೂಪಿಸುವುದು. ಈ ಉದರಿ ಯೋಜನೆಯಲ್ಲಿ ತಾಲ್ಲೂಕು ಮಟ್ಟದಲ್ಲಿ ಎಲ್ಲ ಅಂಶಗಳ ಮಾಹಿತಿ ದೊರಕುವುದು. ಇದರಿಂದ ಉದರಿ ಅಭಿಕರಣಗಳು ತಾಲ್ಲೂಕು ಮಟ್ಟದ ವಿವಿಧ ಚಟುವಟಿಕೆಗಳನ್ನು ಗುರುತಿಸಬಹುದು. ಜಿಲ್ಲಾ ಸಹಕಾರಿ ಬ್ಯಾಂಕ್ ಹಾಗೂ ಭೂ ಅಭಿವೃದ್ಧಿ ಬ್ಯಾಂಕಿನ ಪ್ರತಿ ಸೇವಾಕ್ಷೇತ್ರ ಯೋಜನೆ ರೂಪಿಸುವಲ್ಲಿ ನಬಾರ್ಡ್‌ನ ಜಿಲ್ಲಾ ಕೇಂದ್ರ ಮಾರ್ಗದರ್ಶನ ಮತ್ತು ಸಹಾಯ ನೀಡುವುದು.

### ಅನುಷ್ಠಾನ ಹಾಗೂ ತಾಂತ್ರಿಕ ನೆರವು

ವಾಣಿಜ್ಯ ಬ್ಯಾಂಕುಗಳು ಮಾಡಿದ ಹಳ್ಳಿಗಳ ಸರ್ವೇಕ್ಷಣೆಯಿಂದ ಜಿಲ್ಲಾ ಮಟ್ಟದ ವಿವಿಧ ಅಭಿಕರಣಗಳ ಅಧೋರಚನೆ ಹಾಗೂ ಅವುಗಳ ಪರಸ್ಪರ ಸಂಬಂಧದ ಕೊರತೆಯ ಅರಿವಾಗಿದೆ. ಇದನ್ನು ಅನುಲಕ್ಷಿಸಿ ನಬಾರ್ಡ್ ಜಿಲ್ಲಾ ಮಟ್ಟದ ಅಭಿವೃದ್ಧಿ ಅಧಿಕಾರಿಗಳ ಜೊತೆ ಸಮಾಲೋಚಿಸಿ ಉತ್ಪಾದನೆ ಉದ್ದೇಶಿತ ಉದರಿ ನೀಡಿಕೆಯಲ್ಲಿನ ಅಡೆತಡೆಗಳ ನಿವಾರಣೆ ಹಾಗೂ ಆದಾನವನ್ನು (Input) ಉತ್ತಮಪಡಿಸುವದು. ಜೊತೆಗೇ ಸಾಧ್ಯವಿರುವ ಎಲ್ಲ ತಾಂತ್ರಿಕ ನೆರವನ್ನೂ ನೀಡುವದು.

[10ನೇ ಪುಟ ನೋಡಿ]

# ಅನಿವಾಸಿ ಭಾರತೀಯ ಮತ್ತು ಬ್ಯಾಂಕ್

ವಿದೇಶಗಳಲ್ಲಿ ನೆಲಸಿರುವ ಭಾರತೀಯರ ಸಂಖ್ಯೆ ಈಚಿನ ವರ್ಷಗಳಲ್ಲಿ ಅಧಿಕವಾಗಿದೆ. ಸಾಮಾನ್ಯವಾಗಿ ಅನುಕೂಲಸ್ಥ ದೇಶಗಳಲ್ಲಿರುವ ಈ ಅನಿವಾಸಿ ಭಾರತೀಯರು ವಿದೇಶಿ ಚಲಾರ್ಥಗಳಲ್ಲಿ ಸಂಪಾದಿಸುವ ಹಣವನ್ನು ನಮ್ಮ ಬ್ಯಾಂಕುಗಳು ಆಕರ್ಷಿಸುವಂತೆ ಮಾಡಲು ಭಾರತೀಯ ರಿಸರ್ವ್ ಬ್ಯಾಂಕ್ ನಾನಾ ಯೋಜನೆಗಳನ್ನು ಹಮ್ಮಿಕೊಂಡಿದೆ. ಈ ಯೋಜನೆಗಳ ಸಾಧಕಬಾಧಕಗಳ ಸರಳ ವಿವೇಚನೆ ಇಲ್ಲಿದೆ.

**ಜಿ. ಜಿ. ವಿಷ್ಣು ಮೂರ್ತಿ**
ಬೋಧಕರು, ಭಾರತೀಯ ಸ್ಟೇಟ್ ಬ್ಯಾಂಕ್
ಸಿಬ್ಬಂದಿ ತರಬೇತಿ ಕೇಂದ್ರ, ಬೆಂಗಳೂರು

ಇತ್ತೀಚಿನ ಕೆಲವು ವರ್ಷಗಳಿಂದ ಅನಿವಾಸಿ ಭಾರತೀಯರಿಗೆ ಭಾರತದಲ್ಲಿ ಒಂದು ವಿಶೇಷಸ್ಥಾನ ಲಭಿಸಿದ್ದು ಅವರದೇ ಒಂದು ವಿಶಿಷ್ಟವರ್ಗ ನಿರ್ಮಾಣವಾಗಿದೆ ಎಂದರೆ ಆಶ್ಚರ್ಯವಿಲ್ಲ. ಈ ಅನಿವಾಸಿ ಭಾರತೀಯರಿಗೆ ಭಾರತದಲ್ಲಿಯ ಬ್ಯಾಂಕುಗಳಲ್ಲಿ ಯಾವ ಬಗೆಯ ಸೌಲಭ್ಯಗಳಿವೆ, ಈ ಸೌಲಭ್ಯಗಳ ಬೆಳವಣಿಗೆ ಮತ್ತು ಇವುಗಳ ಅನುಕೂಲತೆ ಅನನುಕೂಲತೆ— ಇವುಗಳ ಬಗ್ಗೆ ಸಾಮಾನ್ಯ ಬ್ಯಾಂಕ್ ನೌಕರರಲ್ಲಿ ಸಾಕಷ್ಟು ತಿಳಿವಳಿಕೆ ಇಲ್ಲವೆಂಬುದು ಕೆಲವರ ಅಭಿಪ್ರಾಯ. ಈ ಕೊರತೆಯನ್ನು ಸ್ವಲ್ಪ ಮಟ್ಟಿಗೆ ತುಂಬುವ ಪ್ರಯತ್ನವೇ ಈ ಲೇಖನದ ಉದ್ದೇಶ.

ಬಹು ಹಿಂದಿನಿಂದಲೂ ಭಾರತೀಯರು ವಿದೇಶಗಳಿಗೆ ವ್ಯಾಪಾರ ಉದ್ಯೋಗಗಳಿಗಾಗಿ ವಲಸೆ ಹೋಗುತ್ತಿದ್ದರೂ ಅದು ಗಣನೀಯ ಪ್ರಮಾಣದಲ್ಲಿ ಬೆಳೆದದ್ದು ಕಳೆದ ಸುಮಾರು 30 ವರ್ಷಗಳಿಂದೀಚೆಗೆ. 1970ರ ತೈಲಬೆಲೆಯ ಹೆಚ್ಚಳದಿಂದ ಪಶ್ಚಿಮಏಷ್ಯ ದೇಶಗಳು ಭಾರಿ ವಿದೇಶೀವಿನಿಮಯ ಹೆಚ್ಚಳ ಸಾಧಿಸಿದುವು. ಈ ದ್ರವ್ಯದ ಸಹಾಯದಿಂದ ಹಲವೊಂದು ಅಭಿವೃದ್ಧಿ ಕಾರ್ಯಗಳನ್ನು ಹಮ್ಮಿಕೊಂಡವು. ಇದು ಭಾರತದಂಥ ದೇಶದ ಜನರಿಗೆ ಉದ್ಯೋಗಾವಕಾಶಗಳ ಬಾಗಿಲು ತೆರೆಯಿತು.

ಈ ಸಮಯದಲ್ಲಿ ಭಾರತ ತನ್ನ ತೈಲ ಆವಶ್ಯಕತೆಯಲ್ಲಿ ಹೆಚ್ಚಿನ ಪ್ರಮಾಣವನ್ನು ಆಮದು ಮಾಡಿಕೊಳ್ಳುತ್ತಿತ್ತು. ಇದು ವಿದೇಶೀವಿನಿಮಯ ಸ್ಥಿತಿಯ ಮೇಲೆ ಗಂಭೀರ ಪರಿಣಾಮವನ್ನು ಉಂಟುಮಾಡಿತು. ಈ ಸಂದರ್ಭದಲ್ಲಿ ಸರ್ಕಾರದ ಗಮನ ಸಹಜವಾಗಿಯೇ ವಿದೇಶಕ್ಕೆ ವಲಸೆ ಹೋದ ಭಾರತೀಯರ ಮೇಲೆ ಬಿತ್ತು. ಈ ವರ್ಗದ ಜನ ವಿದೇಶಗಳಲ್ಲಿ ಸಾಕಷ್ಟು ಹಣ ಸಂಪಾದಿಸುತ್ತಿರುವುದರಿಂದ, ಅವರ ಉಳಿತಾಯದ ಹಣವನ್ನು ನಮ್ಮ ದೇಶದತ್ತ ಹರಿಯುವಂತೆ ಮಾಡಿದರೆ ದೇಶದಲ್ಲಿರುವ ಉಸಿರುಕಟ್ಟಿಸುವಂತಹ ವಿದೇಶೀ ವಿನಿಮಯ ಕೊರತೆಯ ಸ್ಥಿತಿಯನ್ನು ಸುಧಾರಿಸಬಹುದು ಎಂದು ಯೋಚಿಸಿತು. ಆ ಸಮಯದಲ್ಲಿ ಅನಿವಾಸಿ ಭಾರತೀಯರಿಗೆ ಭಾರತದಲ್ಲಿಯ ಬ್ಯಾಂಕುಗಳಲ್ಲಿ ಲಭ್ಯವಿದ್ದದ್ದು ಸಾಮಾನ್ಯ ಅನಿವಾಸಿ ಖಾತೆ ಮಾತ್ರ: ಅಂದರೆ ''ಆರ್ಡಿನರಿ ನಾನ್-ರೆಸಿಡೆಂಟ್ ಅಕೌಂಟ್.'' ಈ ಸೌಲಭ್ಯ ಅನಿವಾಸಿಗಳ ಹಿತದೃಷ್ಟಿಯಿಂದ ಬಹಳ ಅನಾಕರ್ಷಕವಾಗಿದ್ದುದರಿಂದ 1970ರಲ್ಲಿ ಭಾರತೀಯ ರಿಸರ್ವ್ ಬ್ಯಾಂಕ್ ಒಂದು ಹೊಸ ಯೋಜನೆಯನ್ನು ಜಾರಿಗೆ ತಂದಿತು. ಇದು ಅನಿವಾಸಿ ಬಾಹ್ಯಖಾತೆ(NonResident(External) Account). ಈ ಯೋಜನೆಯ ವಿವರ ತಿಳಿಯುವ ಮೊದಲು ಅನಿವಾಸಿ ಭಾರತೀಯ ಎಂದರೆ ಯಾರು ಎಂಬುದನ್ನು ನೋಡೋಣ.

### ಯಾರು ಅನಿವಾಸಿ ?

ವಿದೇಶೀ ವಿನಿಮಯ ವಿನಿಯಮನ ಅಧಿನಿಯಮದ (Foreign Exchange Regulation Act) ಪ್ರಕರಣದ 2(p) ಮತ್ತು 2(q) ಗಳಿಂದ ಅನಿವಾಸಿ ಭಾರತೀಯರನ್ನು ಈ ರೀತಿ ಗುರುತಿಸಬಹುದು : ಯಾವುದೇ ಭಾರತೀಯ ಪ್ರಜೆ ಭಾರತದ ಹೊರಗೆ ನೆಲಸಿದ್ದು, ಅಲ್ಲಿ ಉದ್ಯೋಗದಲ್ಲಿ ನಿರತನಾಗಿ ಅಥವಾ ವ್ಯಾಪಾರ ವ್ಯವಹಾರದಲ್ಲಿ ತೊಡಗಿ ಅಥವಾ ಬೇರೆ ಯಾವುದೇ ಉದ್ದೇಶಕ್ಕಾಗಿ

ವಿದೇಶದಲ್ಲಿ ನೆಲೆಸಿದ್ದು, ಆ ಉದ್ದೇಶದಿಂದಾಗಿ ಆತ ಅಲ್ಲಿ ಅನಿರ್ದಿಷ್ಟಕಾಲ ನೆಲಸಿಬೇಕು. ಇಲ್ಲಿ ನಾವು ನೆನಪಿಡಬೇಕಾದ ಅಂಶವೆಂದರೆ, ಅನಿವಾಸಿತ್ವವನ್ನು ನಿರ್ಧರಿಸಲು ಒಂದು ವ್ಯಕ್ತಿ ಎಷ್ಟು ಅವಧಿ ವಿದೇಶದಲ್ಲಿ ನೆಲೆಸಿದ್ದಾನೆ ಎನ್ನುವುದಕ್ಕಿಂತಲೂ, ಆ ವ್ಯಕ್ತಿ ಅಲ್ಲಿಗೆ ಯಾವ ಉದ್ದೇಶದಿಂದ ಹೋಗಿ ನೆಲೆಸಿದ್ದಾನೆ ಎಂಬುದನ್ನು ತಿಳಿಯುವುದು ಮುಖ್ಯ. ಆತ ಅಲ್ಲಿ ನೆಲೆಸಿರುವ ಉದ್ದೇಶ ಸಂಪಾದನೆ ಮಾಡುವುದಾಗಿರಬೇಕು. ಉನ್ನತ ವ್ಯಾಸಂಗಕ್ಕಾಗಿ, ವಿದೇಶ ಪ್ರವಾಸಕ್ಕಾಗಿ, ವೈದ್ಯಕೀಯ ಚಿಕಿತ್ಸೆಗಾಗಿ ವಿದೇಶದಲ್ಲಿ ಎಷ್ಟೇ ದಿನ/ವರ್ಷಗಳಿದ್ದರೂ ಅಂಥವರನ್ನು ಅನಿವಾಸಿಗಳೆಂದು ವರ್ಗೀಕರಿಸುವಂತಿಲ್ಲ. ಇಲ್ಲಿ ಒಂದು ವಿಷಯವನ್ನು ನೆನಪಿನಲ್ಲಿಡಬೇಕು. ಅದೆಂದರೆ, ಆದಾಯ ತೆರಿಗೆ ಅಧಿನಿಯಮದ ಪ್ರಕಾರ ಅನಿವಾಸಿ ಭಾರತೀಯತ್ವವನ್ನು ಕುರಿತಂತೆ ಬೇರೆ ಯಾವುದೇ ಬಗೆಯ ವ್ಯಾಖ್ಯೆಯಿದ್ದರೂ ಅದನ್ನು ತೆರಿಗೆ ವಸೂಲಿ ದೃಷ್ಟಿಯಿಂದ ಮಾತ್ರ ನೋಡಬೇಕಾಗುತ್ತದೆ.

ಮೇಲ್ಕಂಡ ಅನಿವಾಸಿ ಭಾರತೀಯ ಪ್ರಜೆಗಳಲ್ಲದೆ ಭಾರತೀಯ ಸಂಜಾತರೂ ಅನಿವಾಸಿ ಖಾತೆಗಳಲ್ಲಿ ಹಣ ತೊಡಗಿಸಬಹುದು. ಭಾರತೀಯ ಸಂಜಾತರನ್ನು (persons of Indian origin) ಭಾರತೀಯ ರಿಸರ್ವ್ ಬ್ಯಾಂಕ್ ವ್ಯಾಖ್ಯೆಯಂತೆ ಈ ರೀತಿ ಗುರುತಿಸಬಹುದು:

1) ಒಂದು ವ್ಯಕ್ತಿ ಯಾವುದೇ ಸಮಯದಲ್ಲಿ ಭಾರತದ ರಹದಾರಿ ಪರವಾನಗಿ ಹೊಂದಿದ್ದು ಈಗ ವಿದೇಶೀ ರಹದಾರಿ ಪರವಾನಗಿ ಹೊಂದಿರಬಹುದು. ಅಥವಾ ಆ ವ್ಯಕ್ತಿ ಅಥವಾ ಆತನ ಮಾತಾಪಿತೃಗಳಲ್ಲಿ ಒಬ್ಬರು ಅಥವಾ ಆತನ ಅಜ್ಜ ಅಜ್ಜಿಯರಲ್ಲಿ ಒಬ್ಬರು ಅವಿಭಾಜ್ಯ ಭಾರತದಲ್ಲಿ ಶಾಶ್ವತವಾಗಿ ನೆಲೆಸಿದ್ದಿರಬೇಕು.

2) ಅನಿವಾಸಿ ಭಾರತೀಯನ ಅಥವಾ ಭಾರತೀಯ ಸಂಜಾತನ ಪತ್ನಿ ಯಾವುದೇ ದೇಶದ ಪ್ರಜೆಯಾಗಿರಬಹುದು. ಆಕೆ ವಿವಾಹದ ಮೂಲಕ ಭಾರತೀಯ ಸಂಜಾತತ್ವವನ್ನು ಪಡೆಯುತ್ತಾಳೆ.

### ಆಕರ್ಷಕ ಯೋಜನೆಗಳು

ಅನಿವಾಸಿ ಭಾರತೀಯರು ಮತ್ತು ಭಾರತೀಯ ಸಂಜಾತರ ಗುಣಲಕ್ಷಣಗಳನ್ನು ತಿಳಿದಂತಾಯಿತು. ಈ ವರ್ಗದ ಜನರ ಉಳಿತಾಯದ ಹಣವನ್ನು ಭಾರತದ ಬ್ಯಾಂಕಿಂಗ್ ಸಂಸ್ಥೆಗಳಿಗೆ ಹರಿಯುವಂತೆ ಮಾಡಲು ಭಾರತೀಯ ರಿಸರ್ವ್ ಬ್ಯಾಂಕ್ ಈ ಮುಂದಿನ ಯೋಜನೆಗಳನ್ನು ರೂಪಿಸಿತು. ಈ ಸೇವೆಯನ್ನು ಅಧಿಕೃತ ವಿದೇಶೀ ವಿನಿಮಯ ವ್ಯವಹಾರ ಮಾಡುವ ವಾಣಿಜ್ಯ ಬ್ಯಾಂಕುಗಳು ಮಾತ್ರ ನೀಡಬಹುದು (ಭಾರತೀಯ ರಿಸರ್ವ್ ಬ್ಯಾಂಕ್ ಕೆಲವೊಂದು ಸಹಕಾರೀ ಬ್ಯಾಂಕ್‌ಗಳಿಗೂ ಪರವಾನೆ ಕೊಟ್ಟಿದೆ) :

1 ಸಾಮಾನ್ಯ ಅನಿವಾಸಿ ಖಾತೆ
2 ಅನಿವಾಸಿ (ಬಾಹ್ಯ) ರೂಪಾಯಿ ಖಾತೆ
3 ವಿದೇಶೀ ಚಲಾರ್ಥ (ಕರೆನ್ಸಿ) ಅನಿವಾಸಿ ಖಾತೆ.

### ಸಾಮಾನ್ಯ ಅನಿವಾಸಿ ಖಾತೆ

ಯಾವುದೇ ಭಾರತೀಯ ಅನಿವಾಸಿಯಾದ ಕೂಡಲೇ ಆತ ಭಾರತದಲ್ಲಿರುವ ತನ್ನ ಬ್ಯಾಂಕ್ ಖಾತೆಗಳನ್ನು ಸಾಮಾನ್ಯ ಅನಿವಾಸಿ ಖಾತೆಯೆಂದು ಪರಿವರ್ತಿಸಬೇಕಾಗುತ್ತದೆ. ಅಲ್ಲದೆ ಈ ಖಾತೆಯನ್ನು ಭಾರತೀಯ ಸಂಜಾತರೂ ತೆರೆಯಬಹುದು. ಇದು ಚಾಲ್ತಿ ಖಾತೆ ಇರಬಹುದು, ಉಳಿತಾಯ ಖಾತೆ ಇರಬಹುದು, ಇಲ್ಲವೇ ಅವಧಿ ಖಾತೆ ಇರಬಹುದು. ಈ ಖಾತೆಯಿಂದ ಹಣವನ್ನು ಸ್ಥಳೀಯ ಖರ್ಚುಗಳಿಗೆ ಉಪಯೋಗಿಸಬಹುದು. ಈ ಖಾತೆಯ ಮುಖ್ಯ ಪ್ರಯೋಜನವೆಂದರೆ, ಅನಿವಾಸಿಗಳು ಭಾರತದಲ್ಲಿ ಗಳಿಸುವ, ಪರಿವರ್ತಿಸಲು ಸಾಧ್ಯವಿಲ್ಲದ, ವರಮಾನಗಳು, ಬಡ್ಡಿ, ಮನೆಬಾಡಿಗೆ ಮತ್ತು ಡಿವಿಡೆಂಡ್‌ಗಳನ್ನು ಜಮಾ ಮಾಡಬಹುದು.

ಆದರೆ ಈ ಖಾತೆಯ ಮುಖ್ಯ ಪ್ರತಿಕೂಲಗಳು ಈ ರೀತಿ ಇವೆ :

1 ಈ ಖಾತೆಯಿಂದ ಬರುವ ಬಡ್ಡಿ ವರಮಾನದಲ್ಲಿ ಶೇಕಡ 30 ಆದಾಯ ತೆರಿಗೆ ಕೊಡಬೇಕಾಗುತ್ತದೆ.

2 ಸಂಪತ್ತು ತೆರಿಗೆಯಿಂದ ಇದಕ್ಕೆ ವಿನಾಯ್ತಿ ಇಲ್ಲ.

3 ಭಾರತೀಯ ರಿಸರ್ವ್ ಬ್ಯಾಂಕ್ ಪರವಾನಗಿ ಇಲ್ಲದೆ ಹಣವನ್ನು ಈ ಖಾತೆಯಿಂದ ವಿದೇಶಕ್ಕೆ ರವಾನಿಸುವಂತಿಲ್ಲ. ರವಾನಿಸಲು ಇಚ್ಛಿಸಿದ ಹಣ ಈ ಮುಂಚೆ ವಿದೇಶದಿಂದ ಹರಿದುಬಂದದ್ದು ಎಂದು ರಿಸರ್ವ್ ಬ್ಯಾಂಕಿಗೆ ಮನವರಿಕೆಯಾದರೆ ಮಾತ್ರ ಪರವಾನಗಿ ದೊರೆಯುವುದು.

ಈ ನ್ಯೂನತೆಗಳಿಂದಾಗಿ ಈ ಖಾತೆಯು ಉಪಯೋಗ ಅನಿವಾಸಿಗಳ ದೃಷ್ಟಿಯಿಂದ ಅಷ್ಟೇನೂ ಆಕರ್ಷಕವಲ್ಲ. ಇದರ ಉಪಯೋಗ ಭಾರತದಲ್ಲಿ ಬರುವ, ಪರಿವರ್ತಿಸಲಸಾಧ್ಯವಾದ ವರಮಾನದ ಹಣವನ್ನು ಜಮಾ ಮಾಡುವುದಕ್ಕೆ ಮಾತ್ರ ಸೀಮಿತವೆಂದು ಹೇಳಬಹುದು. ಏಕೆಂದರೆ ಪರಿವರ್ತಿಸಲಸಾಧ್ಯವಾದ ಹಣವನ್ನು ಮುಂದೆ ವಿವರಿಸುವ ಖಾತೆಗಳಿಗೆ ಜಮಾ ಮಾಡುವಂತಿಲ್ಲ. ಸಾಮಾನ್ಯ ಅನಿವಾಸಿ ಖಾತೆಯಲ್ಲಿಯ ನ್ಯೂನತೆಗಳನ್ನು ತುಂಬುವ ದೃಷ್ಟಿಯಿಂದ 1970ರಲ್ಲಿ ಅನಿವಾಸಿ (ಬಾಹ್ಯ) ಖಾತೆಯನ್ನು ರೂಪಿಸಲಾಯಿತು.

### ಅನಿವಾಸಿ (ಬಾಹ್ಯ) ಖಾತೆ

ಅನಿವಾಸಿ ಭಾರತೀಯರು ಮತ್ತು ಭಾರತೀಯ ಸಂಜಾತರು ಈ ಖಾತೆಯನ್ನು ತೆರೆಯಬಹುದು. ಇದುಕೂಡ ಚಾಲ್ತಿ ಖಾತೆ ಇರಬಹುದು, ಉಳಿತಾಯ ಖಾತೆ ಇರಬಹುದು ಅಥವಾ ಸಾವಧಿ ಖಾತೆ ಇರಬಹುದು. ಈ ಖಾತೆಗಳನ್ನು ಕೂಡ ಭಾರತದ ರೂಪಾಯಿಯಲ್ಲೇ ತೆರೆಯಲಾಗುವುದು. ಆದರೆ ಈ ರೂಪಾಯಿಯನ್ನು ಪರಿವರ್ತನೀಯ ರೂಪಾಯಿ

---

## ಜಿಲ್ಲೆಗೊಂದು ನಬಾರ್ಡ್ ಕಛೇರಿ

[9ನೇ ಪುಟದಿಂದ ಮುಂದುವರಿದುದು]

### ಮಾಹಿತಿ ವ್ಯವಸ್ಥೆ ಮತ್ತು ಕಣ್ಗಾವಲು

ಸೇವಾಕ್ಷೇತ್ರ ಅಭಿಗಮನದ ಕಾರ್ಯವನ್ನು ಇನ್ನು ಮುಂದೆ ನಬಾರ್ಡ್ ನಿಯಂತ್ರಿಸುವದು. ಈ ಕೆಲಸಕ್ಕಾಗಿ, ಜಿಲ್ಲೆಯ ಅಗ್ರ ಬ್ಯಾಂಕ್ ನಿಗದಿತ ಅವಧಿಯಲ್ಲಿ ಸೇವಾಕ್ಷೇತ್ರಗಳ ಮತ್ತು ಅಭಿಕರಣಗಳ ಉದರಿ ಯೋಜನೆಗಳ ವಿವರಗಳನ್ನು ನಬಾರ್ಡ್‌ಗೆ ನೀಡುವುದು. ಈ ವಿವರಗಳ ಆಧಾರದ ಮೇಲೆ ನಬಾರ್ಡ್ ವಿವಿಧ ಅಭಿಕರಣಗಳ ಸೇವಾಕ್ಷೇತ್ರಗಳ ಮೌಲ್ಯಮಾಪನೆಮಾಡಿ ಸಾಧ್ಯವಿದ್ದೆಡೆ ಸಂಬಂಧಿಸಿದ ಶಾಖೆ ಕಛೇರಿಗಳಿಗೆ ಸೂಕ್ತ ಸಲಹೆ ಮತ್ತು ಮಾರ್ಗದರ್ಶನ ನೀಡುವದು.

ಜಿಲ್ಲೆಯ ವಿವಿಧ ಅಭಿಕರಣಗಳ ಉದರಿ ಯೋಜನೆ ಕಾರ್ಯವನ್ನು ಪ್ರತಿ ಮೂರು ತಿಂಗಳಿಗೊಮ್ಮೆ ಪರಿಶೀಲಿಸಿ ವರದಿಯನ್ನು ನಬಾರ್ಡ್ ತನ್ನ ಜಿಲ್ಲಾ ಕೇಂದ್ರದಿಂದ ವಲಯ ಕಛೇರಿಗೆ ಹಾಗೂ ಭಾರತೀಯ ರಿಸರ್ವ್ ಬ್ಯಾಂಕಿಗೆ ಕಳಿಸುವದು. ಅಂಕಿ ಅಂಶಗಳ ಸಂಗ್ರಹಣೆ ಹಾಗೂ ಬಳಕೆಗಾಗಿ ಜಿಲ್ಲಾ ಕೇಂದ್ರದಲ್ಲಿ ಗಣಕವನ್ನು ಸ್ಥಾಪಿಸಬಹುದು.

### ಇತರ ಕಾರ್ಯಗಳು

ನಬಾರ್ಡ್‌ನ ಕೆಲಸ ಗ್ರಾಮೀಣ ಅಭಿವೃದ್ಧಿ ಮಾತ್ರವಲ್ಲ. ವಾಣಿಜ್ಯ ಬ್ಯಾಂಕುಗಳ ಗ್ರಾಮೀಣ ಶಾಖೆಗಳ ಅಭಿವೃದ್ಧಿ ಯೋಜನೆಗಳ ಜೊತೆಗೆ, ನಗರ ಪ್ರದೇಶದಲ್ಲಿಯ ಶಾಖೆಗಳ ಯೋಜನೆಗಳನ್ನು ನಬಾರ್ಡ್ ಲಕ್ಷ್ಯದಲ್ಲಿರಿಸಿಕೊಳ್ಳಬೇಕಾಗುತ್ತದೆ. ಜಿಲ್ಲೆಯ ಒಂದು ಸಮಗ್ರ ಚಿತ್ರಣ ದೊರೆಯಬೇಕಾದರೆ ನಗರ ಪ್ರದೇಶವನ್ನು ಕಡೆಗಣಿಸುವಂತಿಲ್ಲ. ಜಿಲ್ಲೆಯ ಅಗ್ರ ಬ್ಯಾಂಕ್ ಜಿಲ್ಲೆಯಲ್ಲಿ ನಡೆಯುತ್ತಿರುವ ಎಲ್ಲ ಉದರಿ ಯೋಜನೆಗಳ ವಿವರಗಳನ್ನೂ ಸಂಗ್ರಹಿಸಿ ಅವುಗಳ ಮಾಹಿತಿಯನ್ನು ನಬಾರ್ಡ್‌ಗೆ ನೀಡುವದು.

ಜಿಲ್ಲಾ ಮಟ್ಟಕ್ಕೆ ನಬಾರ್ಡ್ ಬರುವುದು ಸ್ವಾಗತಾರ್ಹ. ಈಗಾಗಲೇ ಜಿಲ್ಲಾಮಟ್ಟದಲ್ಲಿ ಕಾರ್ಯನಿರ್ವಹಿಸುತ್ತಿರುವ ಅಭಿಕರಣಗಳ ಜೊತೆ ಹೊಂದಾಣಿಕೆ ಮಾಡಿಕೊಂಡು ಪ್ರಾಮಾಣಿಕವಾಗಿ ಅತ್ಯಂತ ಕಾಳಜಿಯಿಂದ ಕೆಲಸ ನಿರ್ವಹಿಸಿದರೆ ಬರುವ ದಶಕಗಳಲ್ಲಿ ದೇಶದ ಪ್ರಗತಿಯ ಹಾದಿ ಇನ್ನಷ್ಟು ಸುಗಮವಾಗುವುದರಲ್ಲಿ ಸಂದೇಹವಿಲ್ಲ. ●

ಎಂದು ಕರೆಯುವರು. ವಿದೇಶದಿಂದ ರವಾನಿಸಲಾದ ಹಣವನ್ನು, ಅದು ಯಾವುದೇ ಕರೆನ್ಸಿಯಲ್ಲಿರಲಿ, ಅದನ್ನು ರೂಪಾಯಿಗೆ ಪರಿವರ್ತಿಸಿ ಜಮಾ ಮಾಡಬೇಕಾಗುತ್ತದೆ.

ಈ ಮೊದಲು ಚರ್ಚಿಸಿದ ಸಾಮಾನ್ಯ ಅನಿವಾಸಿ ಖಾತೆಗೂ ಅನಿವಾಸಿ ಬಾಹ್ಯ ಖಾತೆಗೂ ಇರುವ ಮುಖ್ಯವಾದ ವ್ಯತ್ಯಾಸಗಳು ಇವು :

1 ಖಾತೆದಾರನ, ವಿದೇಶೀ ಮೂಲದ್ದಲ್ಲದ, ಭಾರತದಲ್ಲಿ ಲಭಿಸಿದ, ಯಾವುದೇ ವರಮಾನ, ಬಡ್ಡಿ, ಬಾಡಿಗೆ ಅಥವಾ ಡಿವಿಡೆಂಡ್‌ಗಳನ್ನು ಈ ಖಾತೆಗೆ ಜಮಾ ಮಾಡುವಂತಿಲ್ಲ.

2 ಎಲ್ಲ ಜಮಾವಣೆಗಳೂ ವಿದೇಶೀ ಮೂಲದಿಂದ ಬ್ಯಾಂಕಿಂಗ್ ಸಂಸ್ಥೆಗಳ ಮೂಲಕ ಹರಿದು ಬಂದವಾಗಿರಬೇಕು.

3 ವಿದೇಶೀ ಕರೆನ್ಸಿ ನೋಟುಗಳನ್ನು ರೂಪಾಯಿಗೆ ಪರಿವರ್ತಿಸಿ ಜಮಾ ಮಾಡಬಹುದು.

ಅನಿವಾಸಿಗಳಿಗೆ ಮೇಲ್ಕಂಡ ಅನಿವಾಸಿ (ಬಾಹ್ಯ) ಖಾತೆಯಿಂದ ಸಿಗುವ ಪ್ರಯೋಜನಗಳೆಂದರೆ :

1 ಸಾವಧಿ ಠೇವಣಿಯ ಮೇಲೆ ಭಾರತೀಯ ನಿವಾಸಿಗಳು ಪಡೆಯುವುದಕ್ಕಿಂತ ಹೆಚ್ಚಿನ ಬಡ್ಡಿ ದರ ಕೊಡಲಾಗುವುದು.

2 ಭಾರತದ ವರಮಾನ ತೆರಿಗೆಯಿಂದ ಸಂಪೂರ್ಣ ವಿನಾಯಿತಿ.

3 ಸಂಪತ್ತು ತೆರಿಗೆಯಿಂದ ಸಂಪೂರ್ಣ ವಿನಾಯಿತಿ.

4 ಈ ಖಾತೆಯಿಂದ ಹತ್ತಿರದ ಸಂಬಂಧಿಕರಿಗೆ ಕೊಡಲಾದ ಉಡುಗೊರೆಗೆ ಉಡುಗೊರೆ ತೆರಿಗೆಯಿಂದ ವಿನಾಯಿತಿ.

5 ಯಾವುದೇ ಸಮಯದಲ್ಲಿ ಈ ಖಾತೆಯಿಂದ ವಿದೇಶಗಳಿಗೆ ಹಣವನ್ನು ಯಾವ ನಿರ್ಬಂಧವಿಲ್ಲದೆ ರವಾನಿಸಬಹುದು.

6 ಅನಿವಾಸಿ ಭಾರತದಲ್ಲಿರುವ ಆಶ್ರಿತರಿಗೆ ಅವರ ವಿದೇಶ ಪ್ರಯಾಣದ ಖರ್ಚನ್ನು ಈ ಖಾತೆಯಿಂದ ನೀಡಬಹುದು.

7 ಈ ಖಾತೆಯಿಂದ ಹಣವನ್ನು ಸಾಮಾನ್ಯ ಅನಿವಾಸಿ ಖಾತೆಯಲ್ಲಿ ತಿಳಿಸಿದಂತೆ ಸ್ಥಳೀಯ ಖರ್ಚುಗಳಿಗೆ ಉಪಯೋಗಿಸಬಹುದು.

ಸಾಮಾನ್ಯ ಅನಿವಾಸಿ ಖಾತೆಗಳಲ್ಲಿರುವ ಬಹುತೇಕ ನ್ಯೂನತೆಗಳನ್ನು ಅನಿವಾಸಿ (ಬಾಹ್ಯ) ಖಾತೆ ಸಂಪೂರ್ಣವಾಗಿ ತೊಡೆದುಹಾಕಿದ್ದರೂ ಅನಿವಾಸಿಗಳ ದೃಷ್ಟಿಯಿಂದ ಈ ಖಾತೆಯಲ್ಲಿ ಒಂದು ಮುಖ್ಯ ಕೊರತೆಯಿದೆ. ಅದೆಂದರೆ, ಈ ಮುಂಚೆ ತಿಳಿಸಿದಂತೆ ವಿದೇಶದಿಂದ ಹರಿದುಬರುವ ಯಾವುದೇ ನಾಣ್ಯದ ರವಾನೆಯನ್ನು ಮೊದಲು ರೂಪಾಯಿಗೆ ಪರಿವರ್ತಿಸಿ ಈ ಖಾತೆಗೆ ಜಮಾಮಾಡಬೇಕು. ಕೆಲವು ವರ್ಷಗಳ ಅನಂತರ ಠೇವಣಿದಾರ ತನ್ನ ದೇಶಕ್ಕೆ ಹಣವನ್ನು ಮರುಪಡೆಯಲು ಇಚ್ಛಿಸಿದರೆ ಪುನಃ ಅದನ್ನು ರೂಪಾಯಿಯಿಂದ ವಿದೇಶಿ ಚಲಾರ್ಥಕ್ಕೆ ರೂಪಾಂತರಗೊಳಿಸಬೇಕಾಗುತ್ತದೆ. ಎಲ್ಲರಿಗೂ ತಿಳಿದಂತೆ ಯಾವುದೇ ಅಭಿವೃದ್ಧಿಹೊಂದಿದ ದೇಶದ ಕರೆನ್ಸಿಯು ದಿನಕಳೆದಂತೆ ರೂಪಾಯಿಗೆ ಹೋಲಿಸಿದಾಗ ತನ್ನ ವಿನಿಮಯ ಮೌಲ್ಯವನ್ನು ಹೆಚ್ಚಿಸಿಕೊಳ್ಳುತ್ತದೆ. ಇದರಿಂದ ಅನಿವಾಸಿ ಠೇವಣಿದಾರನಿಗೆ ತನ್ನ ಠೇವಣಿಯಿಂದ ದಿನಕಳೆದಂತೆ ನಷ್ಟವಾಗುವ ಸಂಭವವೇ ಹೆಚ್ಚು.

## ವಿದೇಶಿ ಚಲಾರ್ಥ ಅನಿವಾಸಿ ಖಾತೆ

ಅನಿವಾಸಿ (ಬಾಹ್ಯ) ಖಾತೆಯಲ್ಲಿನ ಕೊರತೆಯನ್ನು ಗಮನದಲ್ಲಿಟ್ಟುಕೊಂಡು, ಅನಿವಾಸಿಗಳಿಗೆ ಹೆಚ್ಚಿನ ಸೌಲಭ್ಯ ನೀಡುವ ದೃಷ್ಟಿಯಿಂದ 1975 ರಲ್ಲಿ ಭಾರತೀಯ ರಿಸರ್ವ್ ಬ್ಯಾಂಕ್ ವಿದೇಶಿ ಚಲಾರ್ಥ ಅನಿವಾಸಿ ಖಾತೆಯನ್ನು ಜಾರಿಗೆ ತಂದಿತು. ಹೆಸರೇ ಸೂಚಿಸುವಂತೆ, ಈ ಖಾತೆಯನ್ನು ವಿದೇಶಿ ಕರೆನ್ಸಿಯಲ್ಲಿಯೇ ಇರಿಸಲಾಗುವುದು. ಪ್ರಾರಂಭದಲ್ಲಿ ಈ ಯೋಜನೆಯನ್ನು ಬ್ರಿಟಿಷ್ ಪೌಂಡ್ ಮತ್ತು ಅಮೆರಿಕನ್ ಡಾಲರ್‌ಗಳಿಗೆ ಸೀಮಿತಗೊಳಿಸಿದ್ದರೂ ಇತ್ತೀಚೆಗೆ ಇನ್ನೆರಡು ಕರೆನ್ಸಿಗಳನ್ನು ಈ ಖಾತೆಗೆ ಸೇರಿಸಲಾಯಿತು. ಅದು ಜಪಾನೀ ಯೆನ್ ಮತ್ತು ಪಶ್ಚಿಮ ಜರ್ಮನಿಯ ಡಾಯಿಶ್ ಮಾರ್ಕ್. ಈ ಖಾತೆಯಲ್ಲಿ ಠೇವಣಿಯನ್ನು ಸಾವಧಿ ಖಾತೆಯಲ್ಲಿ ಮಾತ್ರ ತೊಡಗಿಸಬಹುದು. ಪ್ರತಿಯೊಂದು ಕರೆನ್ಸಿಗೂ ಬೇರೆಯೇ ಬಡ್ಡಿದರವನ್ನು ನಿರೂಪಿಸಲಾಗಿದೆ. ಅಲ್ಲದೆ ಆಯಾ ದೇಶದ ಬಡ್ಡಿದರದಲ್ಲಿ ಏರಿಳಿತವಾದಂತೆಲ್ಲ ಭಾರತೀಯ ರಿಸರ್ವ್ ಬ್ಯಾಂಕ್ ಠೇವಣಿದಾರನಿಗೆ ಬಡ್ಡಿದರವನ್ನು ಬದಲಾಯಿಸುವುದು. ಇದರ ಮುಖ್ಯ ಉದ್ದೇಶವೆಂದರೆ, ನಮ್ಮ ಬಡ್ಡಿದರವನ್ನು ಆಯಾ ದೇಶದ ಬಡ್ಡಿದರದೊಂದಿಗೆ ಹೋಲಿಸಿದಾಗ ಠೇವಣಿದಾರನಿಗೆ ನಮ್ಮ ಬಡ್ಡಿದರ ಆಕರ್ಷಕವಾಗಿರಬೇಕು.

ಅನಿವಾಸಿ ಠೇವಣಿದಾರನಿಗೆ ಈ ಖಾತೆಯ ಮುಖ್ಯ ಆಕರ್ಷಣೆಯೆಂದರೆ, ಖಾತೆದಾರ, ಉದಾಹರಣೆಗೆ, 10,000 ಅಮೆರಿಕನ್ ಡಾಲರುಗಳನ್ನು ಠೇವಣಿಯಲ್ಲಿ ತೊಡಗಿಸಿದ್ದರೆ ಆತನಿಗೆ ಅವಧಿಯ ಅನಂತರ ಅಸಲು 10,000 ಅಮೆರಿಕನ್ ಡಾಲರ್ ಮತ್ತು ನಿಶ್ಚಿತದರದಲ್ಲಿ ಬಡ್ಡಿಯನ್ನು ಸಹ ಅಮೆರಿಕನ್ ಡಾಲರ್‌ನಲ್ಲಿಯೇ ಪಾವತಿ ಮಾಡಲಾಗುವುದು. ಈ ಮಧ್ಯೆ ರೂಪಾಯಿ ಮತ್ತು ಅಮೆರಿಕನ್ ಡಾಲರ್ ವಿನಿಮಯ ದರ ಎಷ್ಟೇ ಪರಿವರ್ತನೆಯಾಗಿದ್ದರೂ ಠೇವಣಿದಾರನಿಗೆಯಾವ ನಷ್ಟವೂ ಸಂಭವಿಸುವುದಿಲ್ಲ. ಅಲ್ಲದೆ ಅನಿವಾಸಿ (ಬಾಹ್ಯ) ರೂಪಾಯಿ ಖಾತೆಗೆ ಸಿಗುವ ಎಲ್ಲಾ ತೆರಿಗೆ ವಿನಾಯ್ತಿಗಳೂ ಠೇವಣಿದಾರನಿಗೆ ಈ ಖಾತೆಯಿಂದಲೂ ದೊರಕುತ್ತವೆ.

ಮೇಲ್ಕಂಡ ಮೂರು ವಿಧವಾದ ಖಾತೆಗಳನ್ನು ಅನಿವಾಸಿ ನಿಗಮ ಕಾಯಗಳೂ (overseas carporate bodies) ತೆರೆಯಬಹುದು. ಇಂಥ ಯಾವುದೇ ವಿದೇಶಿ ಸಂಸ್ಥೆಯಲ್ಲಿ ಅನಿವಾಸಿ ಭಾರತೀಯ ಅಥವಾ ಭಾರತೀಯ ಸಂಜಾತರ ಬಂಡವಾಳ ಕನಿಷ್ಠ 60% ಇದ್ದಿರಬೇಕು. ಸಾಮಾನ್ಯ ಅನಿವಾಸಿ ಖಾತೆಯನ್ನು ಜಂಟಿ ಖಾತೆಯಾಗಿ ತೆರೆಯಲು ಯಾವ ನಿರ್ಬಂಧವೂ ಇಲ್ಲ. ಆದರೆ ಅನಿವಾಸಿ (ಬಾಹ್ಯ) ಖಾತೆ ಮತ್ತು ವಿದೇಶೀ ಚಲಾರ್ಥ ಅನಿವಾಸಿ ಖಾತೆಗಳನ್ನು ನಿವಾಸಿಗಳ ಜೊತೆ ಜಂಟಿ ಖಾತೆಗಳಾಗಿ ತೆರೆಯುವಂತಿಲ್ಲ. ಆದರೆ ಮತ್ತೊಬ್ಬ ಅನಿವಾಸಿಯ ಜೊತೆ ಜಂಟಿ ಖಾತೆಯನ್ನು ತೆರೆಯಬಹುದು.

ಹಿಂದೆ ಹೇಳಲಾದ ಮೂರು ಖಾತೆಗಳಿಗೂ ನಾಮ ನಿರ್ದೇಶನ ಸೌಲಭ್ಯವಿದೆ. ಆದರೆ ನಾಮಿತ (ನಾಮಿನಿ) ಅನಿವಾಸಿಯಾಗಿದ್ದರೆ ಹಣವನ್ನು ವಿದೇಶಕ್ಕೆ ವರ್ಗಾಯಿಸಲು ಭಾರತೀಯ ರಿಸರ್ವ್ ಬ್ಯಾಂಕಿನ ಪರವಾನೆಯನ್ನು ಮುಂಚಿತವಾಗಿ ಪಡೆದುಕೊಳ್ಳಬೇಕು.

## ಭಾರತಕ್ಕೆ ಮರಳಬಯಸಿದರೆ

ಇಲ್ಲಿಯವರೆಗೆ ಒಬ್ಬ ವ್ಯಕ್ತಿ ಅನಿವಾಸಿಯಾಗಿರುವವರೆಗೆ ಆತನಿಗೆ ಭಾರತದಲ್ಲಿ ಬ್ಯಾಂಕುಗಳಿಂದ ಯಾವ ಸೌಲಭ್ಯಗಳಿವೆ ಎಂದು ನೋಡಿದೆವು. ಆತ ಒಂದು ವೇಳೆ ಪುನಃ ಸ್ವದೇಶಕ್ಕೆ ಶಾಶ್ವತವಾಗಿ ನೆಲೆಸಲು ಹಿಂದಿರುಗಿದರೆ ಆತನಿಗೆ ಯಾವ ಹೆಚ್ಚಿನ ಸವಲತ್ತುಗಳಿವೆ ಎಂಬುದನ್ನು ನೋಡಬಹುದು.

ಭಾರತದಲ್ಲಿ ಉದ್ಯೋಗ, ವ್ಯಾಪಾರ ಇಲ್ಲವೇ ಕೈಗಾರಿಕೆಯನ್ನು ಸ್ಥಾಪಿಸುವ ಸಾಧ್ಯತೆಯನ್ನು ಪರೀಕ್ಷಿಸಲು ಬಂದಿದ್ದು ಇಲ್ಲಿ ಶಾಶ್ವತವಾಗಿ ನೆಲೆಸುವ ಬಗ್ಗೆ ಅನಿವಾಸಿಗೆ ಇನ್ನೂ ಅನುಮಾನವಿದ್ದರೆ ಆತ ಪುನರ್‌ಪರಿವರ್ತನ ಸೌಲಭ್ಯವನ್ನು (reconversion facility) ಆರಿಸಿಕೊಳ್ಳಬಹುದು. ಈ ಸೌಲಭ್ಯದ ಅಡಿಯಲ್ಲಿ ಆತ ವಿದೇಶಗಳಲ್ಲಿರುವ ಆಸ್ತಿಯನ್ನು ರಿಸರ್ವ್ ಬ್ಯಾಂಕಿನ ಪರವಾನೆ ಪಡೆದು ಐದು ವರ್ಷಗಳವರೆಗೆ ಮುಂದುವರಿಸಿಕೊಂಡು ಹೋಗಬಹುದು; ಅಥವಾ ತನ್ನಲ್ಲಿರುವ ಸಂಪೂರ್ಣ ವಿದೇಶಿ ಹಣವನ್ನು ಮತ್ತು ಭಾರತದಲ್ಲಿರುವ ಅನಿವಾಸಿ ಖಾತೆಗಳಲ್ಲಿರುವ ಠೇವಣಿಯನ್ನು ರೂಪಾಯಿಗೆ ಪರಿವರ್ತಿಸಿ ಭಾರತಕ್ಕೆ ಹಿಂದಿರುಗಿದ ಮೂರು ತಿಂಗಳೊಳಗೆ ಸಂಬಂಧಪಟ್ಟ ಪ್ರಮಾಣ ಪತ್ರಗಳೊಂದಿಗೆ ನಮೂನೆ ಎಫ್.ಎಡಿ. 2 ಮೂಲಕ ರಿಸರ್ವ್ ಬ್ಯಾಂಕಿಗೆ ಕಳುಹಿಸಬೇಕು. ಭಾರತೀಯ ರಿಸರ್ವ್ ಬ್ಯಾಂಕ್ ಆತನಿಗೆ ಪುನರ್‌ಪರಿವರ್ತನ ಸೌಲಭ್ಯದ ಹಕ್ಕುಪತ್ರವನ್ನು ನೀಡುವುದು. ಈ ಸೌಲಭ್ಯದಂತೆ ಆತ ಒಂದು ವೇಳೆ ಐದು ವರ್ಷಗಳೊಳಗೆ ಪುನಃ ಅನಿವಾಸಿಯಾದರೆ ಈ ಸಂಪೂರ್ಣ ಮೊತ್ತದ ಹಣವನ್ನು ಕೂಡಲೇ ವಿದೇಶಿ ಚಲಾರ್ಥವಾಗಿ ಪರಿವರ್ತಿಸಬಹುದು ಇಲ್ಲವೇ ಅನಿವಾಸಿ ಖಾತೆಯೆಂದು ಅದನ್ನು ಪುನರ್‌ನಾಮಕರಣ ಮಾಡಬಹುದು.

ಶಾಶ್ವತವಾಗಿ ಭಾರತದಲ್ಲಿ ನೆಲೆಸಬಯಸುವ ಅನಿವಾಸಿಗೆ ಇನ್ನೂ ಒಂದು ಸೌಲಭ್ಯವಿದೆ. ಇದನ್ನು ಪುನರಾಗಮಿಸುವಭಾರತೀಯರ ವಿದೇಶೀವಿನಿಮಯ ಹಕ್ಕು ಯೋಜನೆ (Returning Indian's Foreign Exchange Entitlement Scheme) ಎನ್ನುತ್ತಾರೆ.

ಈ ಯೋಜನೆಯ ಪ್ರಕಾರ ಅನಿವಾಸಿ ಭಾರತಕ್ಕೆ ಹಿಂದಿರುಗಿದ ಮೂರು ತಿಂಗಳುಗಳ ಒಳಗೆ ತನ್ನ ಎಲ್ಲ ವಿದೇಶಿ ಚಲಾರ್ಥವನ್ನು ಬ್ಯಾಂಕಿಗೆ ಒಪ್ಪಿಸಿ ಕೊಟ್ಟು, ರೂಪಾಯಿಯಾಗಿ ಪರಿವರ್ತಿಸಬೇಕು. ಜೊತೆಗೆ ತನ್ನ ಎಲ್ಲ ಅನಿವಾಸಿ ಖಾತೆಗಳನ್ನೂ ನಿವಾಸಿ ಖಾತೆಗಳಾಗಿ ಪರಿವರ್ತಿಸಿ ಒಟ್ಟು ಮೊಬಲಗಿಗೆ ಸಂಬಂಧಪಟ್ಟ ಪ್ರಮಾಣಪತ್ರಗಳೊಂದಿಗೆ ನಮೂನೆ FIFEES 1 ಅನ್ನು ರಿಸರ್ವ್ ಬ್ಯಾಂಕಿಗೆ ಕಳುಹಿಸಬೇಕು. ಆತ ಭಾರತಕ್ಕೆ ತಂದಿರುವ ವಿದೇಶಿ ವಿನಿಮಯ ಮತ್ತು ಭಾರತದಲ್ಲಿದ್ದ ಅನಿವಾಸಿ ಠೇವಣಿ ಇವುಗಳ ಮೊತ್ತದ ಅರ್ಧದಷ್ಟು ಮೊಬಲಗಿಗೆ ಭಾರತೀಯ ರಿಸರ್ವ್ ಬ್ಯಾಂಕ್ ಅವನಿಗೆ ವಿದೇಶಿ ವಿನಿಮಯ ಹಕ್ಕುಪತ್ರವನ್ನು ನೀಡುವುದು. ಈ ಹಕ್ಕು ಪತ್ರದ ಮೂಲಕ ಮುಂದಿನ 15 ವರ್ಷಗಳಲ್ಲಿ ಈ ಮುಂದಿನ ಉದ್ದೇಶಗಳಿಗೆ ಯಾವ ಅಡಚಣೆಯಿಲ್ಲದೆ ಬ್ಯಾಂಕ್ ಮೂಲಕ ವಿದೇಶಿ ವಿನಿಮಯವನ್ನು ಪಡೆಯಬಹುದು.

1 ವಿದೇಶ ಪ್ರಯಾಣಕ್ಕೆ ಸಂಬಂಧಪಟ್ಟ ಖರ್ಚುಗಳನ್ನು ಭರಿಸಲು ವಿದೇಶೀ ವಿನಿಮಯವನ್ನು ಸ್ವಂತಕ್ಕೆ, ಅಲ್ಲದೆ ಆಶ್ರಿತರಿಗೂ ಉಪಯೋಗಿಸಬಹುದು.

2 ವಿದೇಶದಲ್ಲಿ ವೈದ್ಯಕೀಯ ಚಿಕಿತ್ಸೆಗೆ ತಗಲುವ ಖರ್ಚು, ಸ್ವಂತ ಮಾತ್ರವಲ್ಲದೆ ಆಶ್ರಿತರಿಗೆ ಕೂಡ.

3 ವಿದೇಶದಲ್ಲಿ ಆಶ್ರಿತರ ವಿದ್ಯಾರ್ಜನೆಯ ಖರ್ಚು.

4 ವಿದೇಶದಲ್ಲಿ ನೆಲೆಸಿರುವ ಹತ್ತಿರದ ಸಂಬಂಧಿಗಳಿಗೆ ಹುಟ್ಟುಹಬ್ಬ, ವಿವಾಹ, ಹಬ್ಬಹರಿದಿನ ಮುಂತಾದ ಸಂದರ್ಭಗಳಲ್ಲಿ ಬಹುಮಾನ ರವಾನೆ.

5 ಉದ್ಯೋಗಕ್ಕೆ ಸಂಬಂಧಪಟ್ಟ ಉಪಕರಣ ಸಾಧನಗಳ ಆಮದು.

6 ವಿದೇಶದ ಜೀವ ವಿಮೆ ಕಂತು.

ಠೇವಣಿದಾರರಿಗೆ ತಮ್ಮ ಹಣವನ್ನು ತೊಡಗಿಸಲು ಅನೇಕ ಸ್ಪರ್ಧಾತ್ಮಕ ಸಂಲೇಖಗಳ ಸೌಲಭ್ಯವಿರುವ ಈ ದಿನಗಳಲ್ಲಿ ಬ್ಯಾಂಕ್ ಠೇವಣಿ ಅಷ್ಟೇನೂ ಆಕರ್ಷಕವಲ್ಲ. ಇದರಿಂದಾಗಿ ದೇಶದಲ್ಲಿ ಬ್ಯಾಂಕ್ ಠೇವಣಿ ಸಂಗ್ರಹ ಕುಂಠಿತಗೊಳ್ಳುತ್ತಿರುವ ಈ ಸಮಯದಲ್ಲಿ ಬ್ಯಾಂಕುಗಳಿಗೆ ಅನಿವಾಸಿ ಭಾರತೀಯರ ಖಾತೆಗಳು ಒಂದು ವರವೇ ಸರಿ. 1989ರ ಮಾರ್ಚ್ ತಿಂಗಳಲ್ಲಿ ಈ ಖಾತೆಗಳಿಂದ ಆಗಿದ್ದ ಒಟ್ಟು ಠೇವಣಿ ಸಂಗ್ರಹ ಸುಮಾರು ರೂ 14,500 ಕೋಟಿ. ದೇಶದ ವಿದೇಶಿ ವಿನಿಮಯ ವಿಕಾಸಲು ಹಣ ಕೇವಲ ಸುಮಾರು ರೂ 5,000 ಕೋಟಿ ಇರುವ ಈ ಸಂದರ್ಭದಲ್ಲಿ ಅನಿವಾಸಿ ಖಾತೆಗಳ ಠೇವಣಿ ಮೊತ್ತವಾದ ರೂ 14,500 ಕೋಟಿ ಎಂಥ ಮಹತ್ವದ ಪಾತ್ರವನ್ನು ವಹಿಸುತ್ತಿದೆ ಎಂಬುದನ್ನು ವಿವರಿಸಿ ಹೇಳಬೇಕಾದ ಅಗತ್ಯವಿಲ್ಲ.

ಆದರೆ ಅನಿವಾಸಿ ಠೇವಣಿಗಳ ಬಗ್ಗೆ ಪರಿಣತರಲ್ಲಿ ಸಾಕಷ್ಟು ಭಿನ್ನಾಭಿಪ್ರಾಯವಿದೆ. ನಾವು ಅನಿವಾಸಿ ಠೇವಣಿಯ ಹೆಸರಿನಲ್ಲಿ ವಾಣಿಜ್ಯ ಸಾಲದ ಬಡ್ಡಿದರಕ್ಕಿಂತ ಹೆಚ್ಚು ಬಡ್ಡಿಯನ್ನು ಈ ಠೇವಣಿದಾರರಿಗೆ ಕೊಡುತ್ತಿದ್ದೇವೆ. ವಿಶ್ವಮಾರುಕಟ್ಟೆಯಲ್ಲಿ ಭಾರತದ ಉದರಿ ಯೋಗ್ಯತೆ ಚೆನ್ನಾಗಿದ್ದು ಇನ್ನೂ ಕಡಿಮೆ ದರದಲ್ಲಿ ನಾವು ಸಾಲವನ್ನು ಎತ್ತಬಹುದು. ಅದರಿಂದ ದೀರ್ಘಕಾಲದಲ್ಲಿ ದೇಶಕ್ಕೆ ಹೆಚ್ಚು ಒಳಿತೇ ಆಗುತ್ತದೆ.

ಆದರೆ ಇದನ್ನು ಸಮರ್ಥಿಸಲೂ ಕಾರಣವಿದೆ. ನಾವು ಒಮ್ಮೆಗೇ ವಿಶ್ವಮಾರುಕಟ್ಟೆಯಲ್ಲಿ ದೊಡ್ಡ ಮೊತ್ತದಲ್ಲಿ ವಾಣಿಜ್ಯ ಸಾಲ ಎತ್ತಲು ಹೋದರೆ ಉದರಿಯೋಗ್ಯತೆ ಕಡಿಮೆಯಾಗುವ ಸಂಭವವಿದೆ. ಆದುದರಿಂದ ಬಡ್ಡಿದರ ಹೆಚ್ಚೆನಿಸಿದರೂ ಅನಿವಾಸಿ ಠೇವಣಿಗಳು ದೇಶದ ಹಿತದೃಷ್ಟಿಯಿಂದ ಹೆಚ್ಚು ಕ್ಷೇಮಕರವೆಂದು ಹೇಳಲಾಗಿದೆ. ●

# ಚಾರಿತ್ರಿಕ ಮೊಕದ್ದಮೆಗಳು

**ಬ್ಯಾಂಕಿಂಗ್ ಕಾನೂನು ಮತ್ತು ಆಚರಣೆ ಇವು ಒಂದು ನಾಣ್ಯದ ಎರಡು ಬದಿಗಳಿದ್ದಂತೆ. ಮೊದ ಮೊದಲು ಆಚರಣೆಯನ್ನಾಧರಿಸಿ ನ್ಯಾಯಾಲಯಗಳು ತೀರ್ಪು ನೀಡುತ್ತಿದ್ದುವು. ಈ ತೀರ್ಪುಗಳ ಆಧಾರದ ಮೇಲೆ ಕಾನೂನು ರೂಪುಗೊಂಡಿತು. ಮುಂದೆ ಕಾನೂನೇ ತೀರ್ಪುಗಳಿಗೆ ಆಧಾರವಾಯಿತು. ಆಚರಣೆಯೂ ಪರೋಕ್ಷವಾಗಿ ಕಾನೂನಿನ ಮೇಲೂ ತೀರ್ಪುಗಳ ಮೇಲೂ ಪ್ರಭಾವ ಬೀರುತ್ತಲೇ ಬಂದಿದೆ.**

ಸಿ. ಗೋವಿಂದಾಚಾರ್
ವಾಣಿಜ್ಯ ಪ್ರವಾಚಕ
ಆಚಾರ್ಯ ಪಾಠಶಾಲಾ ಕಾಲೇಜು
ಬೆಂಗಳೂರು-560 019

ಬ್ಯಾಂಕಿಂಗ್ ಕಾನೂನು ಮತ್ತು ಆಚರಣೆ ಇವು ಒಂದು ನಾಣ್ಯದ ಎರಡು ಬದಿಗಳಿದ್ದಂತೆ. ಹಿಂದೆ ಇಂಗ್ಲಿಷ್ ನ್ಯಾಯಾಲಯಗಳ ತೀರ್ಪು ಆಗ ಜಾರಿಯಲ್ಲಿದ್ದ ವ್ಯವಹಾರ ಪದ್ಧತಿ, ಸಂಪ್ರದಾಯ ಮತ್ತು ರೂಢಿಗಳನ್ನು ಅವಲಂಬಿಸಿತ್ತು. ವ್ಯವಹಾರಕ್ಕೆ ಸಂಬಂಧಿಸಿದ ನಿಬಂಧನೆಗಳು ಮತ್ತು ನಿಯಮಗಳು ಕ್ರಮೇಣ ಶಾಸನವಾಗಿ ರೂಪುಗೊಂಡುವು.

ಬ್ಯಾಂಕಿಂಗ್ ಕಾನೂನು ವರ್ತಕ ನ್ಯಾಯದ ಒಂದು ಅಂಗವಾಗಿ ಬೆಳೆದುಬಂದಿದೆ. ವ್ಯವಹಾರ ವಾಣಿಜ್ಯಗಳು ಮತ್ತು ಕಾನೂನಿನ ಚೌಕಟ್ಟು—ಇವೆರಡೂ ಹೆಣೆದುಕೊಂಡಿವೆ. 'ಬ್ಯಾಂಕ್–ಗ್ರಾಹಕ' ವ್ಯಾಖ್ಯೆಯಿಂದ ಹಿಡಿದು ಬ್ಯಾಂಕ್ ದಿವಾಳಿಯವರೆಗೂ ಮೊಕದ್ದಮೆಗಳ ತೀರ್ಪುಗಳ ರಾಶಿಯೇ ಇದೆ. ಇವುಗಳಲ್ಲಿ ಕೆಲವಕ್ಕೆ ಚಾರಿತ್ರಿಕ ಹಿನ್ನೆಲೆ ಇದೆ. ಕೆಲವು ಇಡೀ ನ್ಯಾಯಾಂಗಕ್ಕೆ ಸವಾಲಾಗಿವೆ. ಇನ್ನು ಕೆಲವು ಘಟನೆಗಳು ಬ್ಯಾಂಕಿಂಗ್ ನಡವಳಿಕೆಗೆ ಮಾರ್ಗದರ್ಶಿಗಳಾಗಿವೆ.

## ಬ್ಯಾಂಕರ್–ಗ್ರಾಹಕ

'ಬ್ಯಾಂಕರ್-ಗ್ರಾಹಕ' ವ್ಯಾಖ್ಯೆಗಳ ಕೊರತೆ ಬಹಳ ಕಾಲದವರೆಗೂ ಇದ್ದು ನ್ಯಾಯಾಲಯಗಳಲ್ಲಿ ಸಮಾಧಾನಕರ ತೀರ್ಪು ದೂರವಾಗಿತ್ತು. ಬ್ಯಾಂಕಿಂಗ್ ಪಂಡಿತರಾದ ಹಾರ್ಟ್, ಪೇಜೆಟ್, ಶೆಲ್ಡನ್ನರ ವ್ಯಾಖ್ಯೆಗಳು ಮತ್ತು ಅಲ್ಲಲ್ಲಿ ಪ್ರಚಲಿತವಿದ್ದ ಬ್ಯಾಂಕಿಂಗ್ ಕಾನೂನುಗಳ ಆಧಾರದಿಂದ ತೀರ್ಪು ಕೊಡಲಾಗುತ್ತಿತ್ತು.

ಬ್ಯಾಂಕಿಗೆ ಬಂದು ಹೋಗಿ ವ್ಯವಹರಿಸುವವನೇ ಗ್ರಾಹಕ ಎಂಬುದು ಬಹಳ ಕಾಲದವರೆಗೆ ರೂಢಿಯಲ್ಲಿತ್ತು. ಆದರೆ ಅವನ ಮೋಸ ಪ್ರಕರಣಗಳು ಬಯಲಾದಾಗ 'ಇವನಾರು?' ಎಂಬ ಜಿಜ್ಞಾಸೆ ಹೆಚ್ಚಾಯಿತು. ಇದರ ಬಗ್ಗೆ ಸಿಗುವ ಮೂಲಾಧಾರ 'ದಿ ಗ್ರೇಟ್ ವೆಸ್ಟರ್ನ್ ರೈಲ್ವೆ ವಿರುದ್ಧ ದಿ ಲಂಡನ್ ಕೌಂಟಿ ಬ್ಯಾಂಕ್ ವ್ಯಾಜ್ಯ, 1901 AC 414.

ಹಗಿನ್ಸ್ ಎಂಬುವನು ಚೆಕ್ಕುಗಳ ವ್ಯವಹಾರದಿಂದ ಕಮಿಷನ್ ಸಂಪಾದಿಸಿ ಜೀವಿಸುತ್ತಿದ್ದ. ಇವನದೇ ಯಾವ ಖಾತೆಯೂ ಇರಲಿಲ್ಲ. 1893 ರಲ್ಲಿ ರೈಲ್ವೆ ಸಂಸ್ಥೆಯಿಂದ ರೇಖಿತವಾದ 142 ಪೌಂಡ್‌ಗಳ ಚೆಕ್ಕೊಂದನ್ನು ಪಡೆದು ವಸೂಲಿಗಾಗಿ ಬ್ಯಾಂಕಿಗೆ ಹಾಜರುಪಡಿಸಿ "ಈ ಮೊತ್ತದಲ್ಲಿ 117 ಪೌಂಡುಗಳನ್ನು ನನಗೆ ಕೊಡಿ. ಉಳಿದದ್ದನ್ನು ಸ್ಥಳೀಯ ಸಮಿತಿಯ ಖಾತೆಗೆ ಜಮೆ ಮಾಡಿ" ಎಂದು ಕೋರಿದ. ಕಪಟವರ್ತನೆಯನ್ನು ಗಮನಿಸದ ಬ್ಯಾಂಕ್ ಅವನು ಹೇಳಿದಂತೆ ಮಾಡಿತು. ಮೋಸ ಬಯಲಾಯಿತು. ಹಗಿನ್ಸ್‌ಗೆ ಶಿಕ್ಷೆಯಾಯಿತು. ಬ್ಯಾಂಕ್ ವಿರುದ್ಧ ಸಂಸ್ಥೆ ಕ್ರಮ

ತೆಗೆದುಕೊಂಡಿತು. ಕೆಳ ನ್ಯಾಯಾಲಯಗಳಲ್ಲಿ ಉಯ್ಯಾಲೆ ಆಡಿ ಅಂತಿಮವಾಗಿ ಮೊಕದ್ದಮೆ ಹೌಸ್ ಆಫ್ ಲಾರ್ಡ್ಸ್ ಪ್ರವೇಶಿಸಿತು.

'ಹೇಗೆ ನೋಡಿದರೂ ಹಗಿನ್ಸ್ ಗ್ರಾಹಕನಲ್ಲ. ಏಕೆಂದರೆ ಇವನ ಹೆಸರಿನಲ್ಲಿ ಯಾವ ಖಾತೆಯೂ ಇಲ್ಲ. ಯಾವ ವ್ಯಕ್ತಿ ಖಾತೆ ಪ್ರಾರಂಭಿಸಿ ವ್ಯವಹರಿಸುವನೊ ಅವನೇ ಗ್ರಾಹಕ' ಎಂದು ನ್ಯಾಯಾಧೀಶ ಲಿಂಡ್ಲೆ ಐತಿಹಾಸಿಕ ತೀರ್ಪಿತ್ತರು. ಅನಂತರ ಮೂಡಿಬಂದ

(ಅ) ಲ್ಯಾಡ್‌ಬ್ರೂಕ್ ವಿ ಟಾಡ್, 1914–30-TLR 433
(ಆ) ಕಮಿಷನರ್ ಆಫ್ ಟ್ಯಾಕ್ಸೇಶನ್ ವಿ ದಿ ಇಂಗ್ಲಿಷ್, ಸ್ಕಾಟಿಷ್ ಮತ್ತು ಆಸ್ಟ್ರೇಲಿಯನ್ ಬ್ಯಾಂಕ್, 1920–AC-683
(ಇ) ಸವರಿ ವಿ ಲಾಯ್ಡ್ಸ್, 1933–AC 701

ಮೊಕದ್ದಮೆಗಳಲ್ಲಿ ಈ ತೀರ್ಪನ್ನೇ ಆಧರಿಸಿ ತೀರ್ಪು ಕೊಡಲಾಯಿತು.

'ಬ್ಯಾಂಕರ್-ಗ್ರಾಹಕ' ಸಂಬಂಧದ ಬಗ್ಗೆ ಪ್ರಥಮವಾಗಿ 1811ರಲ್ಲಿ ಕಾರ್ ವಿ ಕಾರ್ ಪ್ರಕರಣ ಕಾಣಸಿಗುತ್ತದೆ. "ಗ್ರಾಹಕ ಠೇವಣಿ ಇಟ್ಟಾಗ ಋಣ-ಧನಿ ಖಾತೆ ಪ್ರಾರಂಭವಾಗುವುದು" ಎಂಬ ಅಸ್ಪಷ್ಟವಾದ ತೀರ್ಪನ್ನು ಸರ್ ವಿಲಿಯಂ ಗ್ರ್ಯಾಂಟ್ ಕೊಟ್ಟರು.

'ಫೋಲೆ ವಿ ಹಿಲ್ ಮತ್ತು ಇತರರು ವ್ಯಾಜ್ಯ (1848–HLC–28) ಒಂದು ಐತಿಹಾಸಿಕ ಪ್ರಕರಣ. 1838ರಲ್ಲಿ ಫೋಲೆ ಎಂಬವನು ಬ್ಯಾಂಕರ್ ಹಿಲ್‌ನೊಂದಿಗೆ 6,118 ಪೌಂಡುಗಳ ಠೇವಣಿಯೊಂದಿಗೆ ಖಾತೆಯನ್ನು ಪ್ರಾರಂಭಿಸಿದ. ಕ್ರಮೇಣ ಚೆಕ್ ಮೂಲಕ ಎರಡು ಬಾರಿ ಹಣ ಪಡೆದ. ಖಾತೆಯಲ್ಲಿ ಸುಮಾರು 3,000 ಪೌಂಡುಗಳಷ್ಟು ಶಿಲ್ಕಿತ್ತು. ಖಾತೆ 8–10 ವರ್ಷಗಳ ಕಾಲ ವ್ಯವಹಾರವಿಲ್ಲದೆ ನಿದ್ರಿಸುತ್ತಿತ್ತು. ಒಂದು ದಿನ "ನನ್ನ ಹಣ ವಾಪಸ್ ಮಾಡಿ" ಎಂದು ಫೋಲೆ ಕೇಳಿದ. "ನಿಮ್ಮ ಖಾತೆ ಕಾಲ ಮಿತಿಮೀರಿದ್ದರಿಂದ ಹಣ ಕೊಡಲಾಗುವುದಿಲ್ಲ" ಎಂದಿತು, ಬ್ಯಾಂಕ್. "ಯಜಮಾನನಾದ ನಾನು ಕೇಳಿದಾಗ ಹಣ ಕೊಡುವುದು ನಿಮ್ಮ ಕರ್ತವ್ಯ. ನಮ್ಮಿಬ್ಬರ ಸಂಬಂಧವೂ ವಿಶ್ವಾಸಾಶ್ರಿತವಾದ್ದರಿಂದ ಕಾಲಮಿತಿ ನಿಯಮ ಅಡ್ಡಿಬರುವುದಿಲ್ಲ" ಎಂದು ಫೋಲೆ ವಾದಿಸಿದ. ಮೊಕದ್ದಮೆ ರಿಜಿಸ್ಟ್ರಿ–ಛಾನ್ಸರಿ ನ್ಯಾಯಾಲಯಗಳಲ್ಲಿ ಇತ್ಯರ್ಥವಾಗದೆ ಹೌಸ್ ಆಫ್ ಲಾರ್ಡ್ಸ್ ಮುಂದೆ ಬಂತು.

"ಯಾವಾಗ ಗ್ರಾಹಕ ಠೇವಣಿಸಹಿತ ಖಾತೆಯನ್ನು ಆರಂಭಿಸಿದನೋ ಅಂದಿನಿಂದ ಬ್ಯಾಂಕರ್–ಗ್ರಾಹಕರ ನಡುವೆ ಋಣಿ–ಧನಿ ಸಂಬಂಧ ಉಂಟಾಯಿತು. ಈ ಹಣವನ್ನು ಬ್ಯಾಂಕರ್ ಲಾಭದಾಯಕವಾಗಿ ಉಪಯೋಗಿಸಬಹುದು. ಗ್ರಾಹಕನ ಹಣಕ್ಕೆ ಬ್ಯಾಂಕರ್ ಹೊಣೆಯಾಗಿರುತ್ತಾನೆ. ಬೇರಾವ ಸಂಬಂಧವನ್ನೂ ಇಲ್ಲಿ ಸೇರಿಸಬಾರದು" ಎಂದು ನ್ಯಾಯಮೂರ್ತಿ ಕಾಟನ್‌ಹ್ಯಾಮ್ ಚರಿತ್ರಾರ್ಹ ತೀರ್ಪಿತ್ತರು.

ಈ ಪ್ರಕರಣ ಬ್ಯಾಂಕರ್–ಗ್ರಾಹಕ ಯುಗಳ ಸಂಬಂಧಕ್ಕೆ ಭದ್ರವಾದ ಕಾನೂನಿನ ತಳಹದಿ ಹಾಕಿತು. ಭಾರತವೂ ಸೇರಿ ಪ್ರಪಂಚದ ನಾನಾ ಕಡೆಗಳಲ್ಲಿ ಅನೇಕ ಮೊಕದ್ದಮೆಗಳು ಈ ತೀರ್ಪಿನ ಆಧಾರದಿಂದ ಬಗೆಹರಿದುವು. ಉದಾ :

ಧರ್ಮದಾಸ್ ವಿ ಗಂಗಾದೇವಿ
ಇಚ್ಛಾ ವಿ ನಾಥ
ಇಶರ್ ವಿ ಜಿಬನ್
ಸುಬ್ರಹ್ಮಣ್ಯ ಚೆಟ್ಟಿಯಾರ್ ವಿ ಕದಿರೇಶನ್
ಅಫಿಷಿಯಲ್ ಅಸ್ಯೈನಿ ಆಫ್ ಮದ್ರಾಸ್ ವಿ ಸ್ಮಿತ್

"ಗ್ರಾಹಕ ಬೇಡಿಕೆ ಸಲ್ಲಿಸಿದರೆ ಮಾತ್ರ ಬ್ಯಾಂಕರ್ ಕೇಳಿದಷ್ಟು ಹಣ ಕೊಡಬೇಕು" ಎಂದು ಜೋಕಿಂಸನ್ ವಿ ಸ್ವಿಸ್ ಬ್ಯಾಂಕ್ ನಿಗಮ ಪ್ರಕರಣದಲ್ಲಿ ತೀರ್ಮಾನವಾಯಿತು.

## ಬದಲಾವಣೆ, ಖೋಟಾ ಸಹಿ

ಚೆಕ್ ವ್ಯವಹಾರಗಳಲ್ಲಿ ತಿದ್ದುವಿಕೆ ಮತ್ತು ಖೋಟಾ ಸಹಿ ಪ್ರಕರಣಗಳೇ ಹೆಚ್ಚಾಗಿವೆ. ಇವುಗಳಲ್ಲಿ ಬ್ಯಾಂಕರನ ಉಪೇಕ್ಷೆ, ಮೋಸಗಾರನ ನೈಪುಣ್ಯ ಮತ್ತು ಗ್ರಾಹಕನ ಬೇಜವಾಬ್ದಾರಿ—ಇವು ಮೂರೂ ಸೇರಿವೆ. ಬಹುತೇಕ ಪ್ರಕರಣಗಳಲ್ಲಿ ಗ್ರಾಹಕನ ನಿರ್ಲಕ್ಷ್ಯದಿಂದ ಚೌರ್ಯಕ್ಕೆ ಅವಕಾಶವಾಗಿ ಬ್ಯಾಂಕರ್ ಮುಗ್ಗರಿಸಿದ್ದಾನೆ.

ಗ್ರೀನ್‌ವುಡ್ ವಿ ಮಾರ್ಟಿನ್ ಬ್ಯಾಂಕ್, 1913-AC-51 ವ್ಯಾಜ್ಯದಲ್ಲಿ ಪತ್ನಿ ಮಾಡಿದ ಖೋಟಾ ಸಹಿಯ ವಿಷಯವನ್ನು ಸಕಾಲದಲ್ಲಿ ಬ್ಯಾಂಕರನಿಗೆ ತಿಳಿಸದೆ ಇದ್ದುದರಿಂದ ಗ್ರೀನ್‌ವುಡ್ ಭಾರಿ ನಷ್ಟವನ್ನನುಭವಿಸಿದ. ಈ ಪ್ರಕರಣದಲ್ಲಿ ಬ್ಯಾಂಕರ್ ಗ್ರಾಹಕನ ಹೊಣೆಗಾರಿಕೆಯನ್ನು ಎತ್ತಿ ತೋರಿಸಿ ಅದಕ್ಕೆ ಭದ್ರವಾದ ತಳಹದಿಯನ್ನು ಹಾಕಿದ್ದಾನೆ.

ಪ್ರಾಪ್ತಿಕರ್ತನ ಹೆಸರಿನ ಮುಂದೆ ಬಿಟ್ಟಿದ್ದ ಖಾಲಿ ಜಾಗದಿಂದ ಯಾವ ರೀತಿ ಮೋಸ ಜರುಗಿದೆ ಎಂಬುದಕ್ಕೆ ಸ್ಲಿಂಗ್ಸ್‌ಬಿ ಮೊಕದ್ದಮೆ ಸಾಕ್ಷೀಭೂತವಾಗಿದೆ (1931-2 KB 588) ವಿಷಯಗಳು (ಸಂಕ್ಷಿಪ್ತವಾಗಿ) :

(i) ಕಂಬರ್‌ಬರ್ಚ್ ಪ್ಯಾಲಟೈನ್ ಕೈಗಾರಿಕಾ ಮತ್ತು ಹಣಕಾಸಿನ ಸಂಸ್ಥೆಯ ಮಾಜಿ ಅಧ್ಯಕ್ಷ. ಋಣಮುಕ್ತನಾಗದೆ ಹೊರಬಂದ. ಋಣ ತೀರಿಸಲು ಅವಕಾಶ ಎದುರುನೋಡುತ್ತಿದ್ದ.

(ii) ಕಂಬರ್‌ಬರ್ಚ್ ಮತ್ತು ಪಾಟ್ಸ್ ಎಂಬ ಪಾಲುದಾರಿಕೆ ಸಂಸ್ಥೆಯಲ್ಲಿ ನಿರ್ವಾಹಕ.

(iii) ಸ್ಲಿಂಗ್ಸ್‌ಬಿ ಎಂಬಾತ ಆಸ್ತಿ ನಿರ್ವಾಹಕ ಸಂಸ್ಥೆಯಲ್ಲಿ ಸಲಹಾಧಿಕಾರಿ. ಈ ಸಂಸ್ಥೆಯ ಖಾತೆ ಮ್ಯಾನ್‌ಚೆಸ್ಟರ್ ನಗರದ ಡಿಸ್ಟ್ರಿಕ್ಟ್ ಬ್ಯಾಂಕಿನಲ್ಲಿತ್ತು.

ವ್ಯವಹಾರ : ಯುದ್ಧ ಪೂರೈಕೆ ಸಾಲಪತ್ರಗಳ ಮೇಲೆ ಹಣ ಹೂಡಲು ಸಂಸ್ಥೆ ನಿರ್ಧರಿಸಿತು. ಜಾನ್ ಪ್ರುಸ್ಟ್ ಎಂಬ ಷೇರು ದಲ್ಲಾಳಿಗೆ ಚೆಕ್ಕೊಂದನ್ನು ತಯಾರಿಸಲು ಕಂಬರ್‌ಬರ್ಚ್‌ಗೆ ಆದೇಶನೀಡಲಾಯಿತು. ಚೆಕ್‌ಗೆ ಸಹಿ ಬಿದ್ದ ಅನಂತರ ಕಂಬರ್‌ಬರ್ಚ್ ಪ್ರಾಪ್ತಿಕರ್ತನ ಹೆಸರಿನ ಮುಂದೆ ತನ್ನದೇ ಆದ ಸಂಸ್ಥೆಯ ಹೆಸರನ್ನು ಸೇರಿಸಿದ. ಚೆಕ್ ಪೂರ್ತಾ ಇವನ ಬರವಣಿಗೆಯಲ್ಲಿತ್ತು. ಆ ಚೆಕ್ಕು ಈ ರೀತಿ ಕಾಣುತ್ತಿತ್ತು : "ಪೇ ಜಾನ್ ಪ್ರುಸ್ಟ್ ಅಂಡ್ ಕಂಪನಿ ಪರ್ ಕಂಬರ್‌ಬರ್ಚ್ ಅಂಡ್ ಪಾಟ್ಸ್." ಅನಂತರ ಕಂಬರ್‌ಬರ್ಚ್ ಈ ಚೆಕ್ಕನ್ನು ಪ್ಯಾಲಟೈನ್ ಸಂಸ್ಥೆಗೆ ಹಿಂಬರಹದ ಮೂಲಕ ವರ್ಗಾಯಿಸಿ ಋಣಮುಕ್ತನಾದ. ಈ ಸಂಸ್ಥೆಯ ಖಾತೆ ವೆಸ್ಟ್‌ಮಿನ್‌ಸ್ಟರ್ ಬ್ಯಾಂಕಿನಲ್ಲಿತ್ತು. ಹಣ ವಸೂಲಾಯಿತು. ಎಷ್ಟು ದಿನಗಳಾದರೂ ಸಾಲಪತ್ರದ ಆಗಮನವೇ ಇಲ್ಲ. ಸ್ಲಿಂಗ್ಸ್‌ಬಿ ಸಂಸ್ಥೆಗೆ ಸಂಶಯ ಮೂಡಿತು. ಮೋಸ ಬಯಲಾಯಿತು. ಮೊದಲು ವಸೂಲಿ ಬ್ಯಾಂಕರನ ಮೇಲೆ ಕ್ರಮ ಜರುಗಿಸಲಾಯ್ತು, ವಿಫಲವಾಯ್ತು. ಅನಂತರ ಸಂಸ್ಥೆ ಜಿಲ್ಲಾ ಬ್ಯಾಂಕಿನ ಮೇಲೆ ದಾವೆ ಹೂಡಿ 'ಬ್ಯಾಂಕ್ ಅಲಕ್ಷ್ಯ' ಎಂಬ ಕಾರಣದಿಂದ ಜಯ ಗಳಿಸಿತು.

"ಹಿಂಬರಹ ಸರಿಯಾಗಿದೆಯೋ ಇಲ್ಲವೋ ಎಂಬುದನ್ನು ಪರೀಕ್ಷಿಸದೇ ಇದ್ದದ್ದು ಪಾವತಿ ಬ್ಯಾಂಕರನ ಮೊದಲ ತಪ್ಪು. ಚೆಕ್ಕಿನ ಮೇಲೆ ಸಾರಭೂತ ಬದಲಾವಣೆ ಆಗಿದೆ. ಇದು ಅನಧಿಕೃತ ಹಾಗೂ ಅನೂರ್ಜಿತವಾದ್ದರಿಂದ ಬ್ಯಾಂಕರನು ಗ್ರಾಹಕನ ಖಾತೆಯನ್ನು ಋಣಿಸಕೂಡದು. ಗ್ರಾಹಕನೂ ಎಚ್ಚರಿಕೆ ವಹಿಸಬೇಕು" ಎಂದು ಸ್ಕ್ರಟ್ಟನ್ಸ್ ತೀರ್ಪಿತ್ತರು. ಅಂದಿನಿಂದ ಪ್ರಾಪ್ತಿಕರ್ತನ ಹೆಸರಿನ ಮುಂದೆ ಖಾಲಿ ಜಾಗದಲ್ಲಿ ಗೆರೆ ಎಳೆಯುವ ಪದ್ಧತಿ ರೂಢಿಗೆ ಬಂತು.

ಖಾಲಿ ಚೆಕ್ಕು ಕೊಡುವುದೂ ಒಂದೇ, ಮೋಸಕ್ಕೆ ಆಮಂತ್ರಣ ನೀಡುವದೂ ಒಂದೇ. ಲಂಡನ್ ಜಾಯಿಂಟ್ ಸ್ಟಾಕ್ ಬ್ಯಾಂಕ್ ವಿ ಮ್ಯಾಕ್‌ಮಿಲನ್ ಆರ್ಥರ್ ವ್ಯಾಜ್ಯದಲ್ಲಿ ಗುಮಾಸ್ತನೊಬ್ಬ ಕೇವಲ ಅಂಕಿಯಲ್ಲಿ ಬರೆದ 2 ಪೌಂಡ್ ಚೆಕ್ಕೊಂದನ್ನು ತಯಾರಿಸಿ ಯಜಮಾನನ ಸಹಿಯಾದ ಅನಂತರ ಅಂಕಿಯ ಹಿಂದೆ 1 ಮತ್ತು ಮುಂದೆ 0 ಯನ್ನು ಸೇರಿಸಿ 120 ಪೌಂಡುಗಳ ಚೆಕ್ಕಾಗಿ ಪರಿವರ್ತಿಸಿ ಮೋಸ ಮಾಡಿದ. ಬ್ಯಾಂಕ್ ವಿರುದ್ಧ ಕ್ರಮ ಜರುಗಿಸಿದಾಗ "ಸಂಸ್ಥೆಯ ಅಲಕ್ಷ್ಯ ಮೋಸಕ್ಕೆ ಅವಕಾಶಮಾಡಿಕೊಟ್ಟಿದ್ದಲ್ಲದೆ ನಮ್ಮನ್ನೂ ಕತ್ತಲೆಯಲ್ಲಿರಿಸಿದ" ಎಂಬ ಬ್ಯಾಂಕ್ ವಾದವನ್ನು ನ್ಯಾಯಾಧೀಶ ಫಿನ್ಲೆರವರು ಎತ್ತಿಹಿಡಿದು ಗ್ರಾಹಕರನ್ನು ಎಚ್ಚರಿಸಿದರು. ಇದೇ ರೀತಿಯ ಮತ್ತೊಂದು ಮೊಕದ್ದಮೆ, ಯಂಗ್ ವಿ ಗ್ರೋಟ್, 1827–Bing–253.

## ಬ್ಯಾಂಕರನ ಅಲಕ್ಷ್ಯ

ರಾಷ್ಟ್ರಾಧ್ಯಕ್ಷ ಅಥವಾ ರಾಜ್ಯಪಾಲ ಅಥವಾ ರಾಯಭಾರಿಯಿಂದ ಶುಭಸಮಾರಂಭವೊಂದರಲ್ಲಿ ಬಂದ ಉಡುಗೊರೆ ಚೆಕ್ಕು ಬ್ಯಾಂಕರನ ನಿರ್ಲಕ್ಷ್ಯದಿಂದ ತಿರಸ್ಕೃತವಾದರೆ ವ್ಯಕ್ತಿಯ ಸ್ಥಾನಮಾನ, ಗೌರವಗಳ ದೃಷ್ಟಿಯಿಂದ ಭಾರಿ ನಷ್ಟಪರಿಹಾರ ಕೊಡಬೇಕಾಗುವುದು. ಚೆಕ್ಕಿನ ಮೊಬಲಗು ಅಸಾಂಗಿಕ. ಡೇವಿಡ್‌ಸನ್ ವಿ ಬಾರ್ಕ್ಲೇಸ್ ಬ್ಯಾಂಕ್. 1940-1-ALL-ER 316ನಲ್ಲಿ 'ಸಣ್ಣ ಚೆಕ್ಕು ದೊಡ್ಡ ನಷ್ಟ ಪರಿಹಾರ' ಎಂಬ ಸಿದ್ಧಾಂತ ರೂಪುಗೊಂಡಿತು. ಕುದುರೆಜೂಜಿನ ದಳ್ಳಾಳಿ ಡೇವಿಡ್‌ಸನ್ ನೀಡಿದ 5 ಪೌಂಡು ಚೆಕ್ಕು ತಪ್ಪಾಗಿ ಅನಾದರಣೆಯಾಗಿ ನ್ಯಾಯಾಲಯವು ಬ್ಯಾಂಕಿನಿಂದ 250 ಪೌಂಡುಗಳ ನಷ್ಟಪರಿಹಾರ ಕೊಡಿಸಿತು. ಇಂತಹ ಪರಿಸ್ಥಿತಿಯಲ್ಲಿ ಗ್ರಾಹಕ ವ್ಯಾಪಾರಿಯಾಗಿದ್ದರೆ ವಿಶೇಷ ನಷ್ಟ ಪರಿಹಾರಕ್ಕೆ ಮತ್ತು ವ್ಯಾಪಾರಿಯಲ್ಲದಿದ್ದರೆ ಸಾಧಾರಣ ನಷ್ಟಪರಿಹಾರಕ್ಕೆ ಅರ್ಹನಾಗಿರುತ್ತಾನೆ. ಈ ತೀರ್ಪು ಎರಡು ಪ್ರಕರಣಗಳಲ್ಲಿ ತೆಗೆದುಕೊಳ್ಳಲಾಯಿತು.

1 ಗಿಬ್ಬನ್ಸ್ ವಿ ವೆಸ್ಟ್‌ಮಿನ್‌ಸ್ಟರ್ ಬ್ಯಾಂಕ್. 1939-2 Kg 882

2 ಸ್ಟರ್ಲಿಂಗ್ ವಿ ಬಾರ್ಕ್ಲೇಸ್ ಬ್ಯಾಂಕ್.

ಲ್ಯಾಡ್‌ಬ್ರೂಕ್ ವಿ ಟಾಡ್ 1914-30-TLR 433 ಬ್ಯಾಂಕರನ ಉಪೇಕ್ಷೆ ಕುರಿತ ಒಂದು ಪ್ರಕರಣ. ಖಾತೆ ಪ್ರಾರಂಭಿಸಲು ಬಂದ ವ್ಯಕ್ತಿಯನ್ನು ಸಮುಚಿತ ವಿಚಾರಣೆ ಮಾಡದೆ ಗ್ರಾಹಕನಾಗಿ ಅಂಗೀಕರಿಸಿ ಮೋಸ ಜರುಗಿದೆ. ಅಂಚೆ ರವಾನೆಯಲ್ಲಿದ್ದ ಚೆಕ್ಕೊಂದನ್ನು ಅಪರಿಚಿತ ವ್ಯಕ್ತಿಯೊಬ್ಬ ಕದ್ದು ತಾನೇ ನಿಜವಾದ ಪ್ರಾಪ್ತಿಕರ್ತನಂತೆ ನಟಿಸಿ ಖಾತೆ ಪ್ರಾರಂಭಿಸಿ ಚೆಕ್ಕು ವಸೂಲಾದ ಮೇಲೆ ಖಾತೆಯನ್ನು ಮುಕ್ತಾಯಗೊಳಿಸಿ ಪರಾರಿಯಾದ. "ವಿಚಾರಣೆ ಮಾಡದೆ ಬ್ಯಾಂಕರ್ ಅಲಕ್ಷ್ಯ ತೋರಿದ್ದರಿಂದ ಮೋಸವಾಯ್ತು" ಎಂದರು ನ್ಯಾಯಮೂರ್ತಿ ಬೇಲ್‌ಹಾಸ್. ಇದರಿಂದಾಗಿ ಖಾತೆ ಪ್ರಾರಂಭಿಸಲು ನಗದು ಹಣ ಪಾವತಿ ಮಾಡುವುದು ಕಡ್ಡಾಯವಾಯ್ತು. ಈ ಅಂಶವನ್ನು ಭಾರತದಲ್ಲಿ 1960ರ ದಶಕದಲ್ಲಿ ನ್ಯಾಯಮೂರ್ತಿ ಚಾಗ್ಲರವರು ಅಳವಡಿಸಿಕೊಂಡು ತೀರ್ಪಿತ್ತಿದ್ದಾರೆ.

## ಧರಣಾಧಿಕಾರ

"ಬ್ಯಾಂಕರನಿಗೆ ಸಾಮಾನ್ಯ ಧರಣಾಧಿಕಾರ ಒಂದು ಸೂಚ್ಯವಾದ ಹಕ್ಕಾಗಿದೆ. ಇದಕ್ಕೆ ಯಾವ ಒಪ್ಪಂದವೂ ಅಗತ್ಯವಿಲ್ಲ" ಎಂದು ಬ್ರಾಂಡೋ ವಿ ಬಾರ್ನೆಟ್‌ನಲ್ಲಿ ಹೊರಬಂತು. ಬ್ಯಾಂಕರನ ವಿನಿಯೋಗಾಧಿಕಾರ ಕ್ಲೇಟನ್ ಪ್ರಕರಣದಲ್ಲಿ ನಿರ್ಧಾರವಾಯ್ತು. "ಒಂದಕ್ಕಿಂತ ಹೆಚ್ಚು ಋಣವಿದ್ದಲ್ಲಿ ಪ್ರಥಮ ಋಣಿಕೆ ನಮೂದು ಪ್ರಥಮ ಧನಿಕೆಯ ನಮೂದಿನಿಂದ ಚುಕ್ತ ಆಗುವುದು. ಇದುವೇ ಪಾವತಿಗಳ ವಿನಿಯೋಗ" ಎಂದು ಸರ್ ವಿಲಿಯಂ ಗ್ರಾಂಟರು ಹೇಳಿದರು. ಕ್ಲೇಟನ್ ನಿಯಮ ಈಗಲೂ ಬ್ಯಾಂಕಿಂಗ್ ಆಚರಣೆಯಲ್ಲಿ ಸಿದ್ಧಾಂತ ರೂಪದಲ್ಲಿ ಉಪಯುಕ್ತವಾಗಿದೆ.

## ಗೋಪ್ಯತೆ

ಗೋಪ್ಯತೆಯನ್ನು ಕಾಪಾಡುವುದು ಬ್ಯಾಂಕರನ ಅರ್ಹತೆ ಹಾಗೂ ಶಾಸನಬದ್ಧ ಕರ್ತವ್ಯ. ಟೂರ್ನಿಯರ್ ವಿ ನ್ಯಾಷನಲ್ ಪ್ರೊವಿನ್‌ಷಿಯಲ್ ಅಂಡ್ ಯೂನಿಯನ್ ಬ್ಯಾಂಕ್ ಆಫ್ ಇಂಗ್ಲೆಂಡ್ 1924-1-KB 461 —ನಿರುದ್ಯೋಗಿ ಟೂರ್ನಿಯರ್ ಅಲೆದಾಡಿ ಕೊನೆಗೂ ಕೆನ್ನಾನ್ ಸಂಸ್ಥೆಯಲ್ಲಿ ತಾತ್ಕಾಲಿಕವಾಗಿ ಉದ್ಯೋಗ ಪಡೆದ. ಬ್ಯಾಂಕಿನಿಂದ ಓವರ್‌ಡ್ರಾಫ್ಟ್ ಕೇಳಿದ. ವಾರ ಕಂತುಗಳಲ್ಲಿ ತೀರಿಸುವೆನು ಎಂದು ವಚನವಿತ್ತು ತನ್ನ ಯಜಮಾನನ ವಿಳಾಸವನ್ನು ಅರ್ಜಿಯಲ್ಲಿ ನಮೂದಿಸಿದ. ಸಾಲದ ಹಣವನ್ನು ದುರುಪಯೋಗಪಡಿಸಿ ಜೂಜಾಡಿ ಸೋತು ವಚನಭ್ರಷ್ಟನಾದ. ಸಾಲ ಮರುಪಾವತಿಯ ಸಲುವಾಗಿ ಬ್ಯಾಂಕ್ ದೂರವಾಣಿ ಮೂಲಕ ಸಂಸ್ಥೆಯನ್ನು ಸಂಪರ್ಕಿಸಿತು. ಇವರ ಸಂಭಾಷಣೆಯಲ್ಲಿ ಬ್ಯಾಂಕರನು ಟೂರ್ನಿಯರ್‌ನ ಸಾಲ ಮತ್ತು ಜೂಜುಗಾರಿಕೆಯನ್ನು ಹೇಳಿಬಿಟ್ಟ. 6 ತಿಂಗಳ ಅವಧಿ ಮುಗಿದನಂತರ ಸಂಸ್ಥೆ ಇವನನ್ನು ಕೆಲಸದಿಂದ ವಜಾಮಾಡಿತು. ಕೆಲಸ ಹಾಗೂ ಸ್ಥಾನಮಾನಗಳನ್ನು ಕಳೆದುಕೊಂಡ ಟೂರ್ನಿಯರ್ ಬ್ಯಾಂಕ್ ವಿರುದ್ಧ ದಾವೆ ಹಾಕಿ ಸಫಲನಾದ.

"ಕಾನೂನು, ಸಾರ್ವಜನಿಕ ಹಾಗೂ ಬ್ಯಾಂಕರನ ಹಿತಾಸಕ್ತಿಗಳು ಮತ್ತು ಗ್ರಾಹಕನ ಅನುಮತಿ—ಈ ನಾಲ್ಕು ಸಂದರ್ಭಗಳನ್ನು ಬಿಟ್ಟು ಯಾವ ಕಾರಣಕ್ಕೂ ಬ್ಯಾಂಕರ್ ರಹಸ್ಯವನ್ನು ಬಯಲು ಮಾಡಕೂಡದು. ಗೋಪ್ಯತೆ ಕಾಪಾಡುವುದು ಬ್ಯಾಂಕರನ ಹೊಣೆ ಹಾಗೂ ಕರ್ತವ್ಯ" ಎಂದು ನ್ಯಾಯಮೂರ್ತಿ ಬ್ಯಾಂಕರ್ ತೀರ್ಪಿತ್ತರು.

## ಪ್ರಮಾಣಿತ ಚೆಕ್ಕು

"ಪಾವತಿಗೆ ಅರ್ಹವಾಗಿದೆ" ಎಂಬ ಗುರುತುಳ್ಳ ಅಥವಾ ಪ್ರಮಾಣಿತ ಚೆಕ್ಕು ಕಾನೂನುಬಾಹಿರವಲ್ಲದಿದ್ದರೂ ರೂಢಿ-ಆಚರಣೆಗಳಲ್ಲಿಲ್ಲ. ಕೇವಲ ವಿಳೂಕಾಲಾಣೆ ದೇಣಿ ಶಿಲ್ಕಿನಿಂದ 2½ ಲಕ್ಷ ರೂಪಾಯಿಗಳ ವಂಚನೆ ಕುರಿತ ಮೊಕದ್ದಮೆ :

"ಪಂಜಾಬ್ ನ್ಯಾಷನಲ್ ಬ್ಯಾಂಕ್ ವಿ ಬ್ಯಾಂಕ್ ಆಫ್ ಬರೋಡ. 1939-44.

ವಿಷಯಗಳು

ಅ) ಘೋಷ್—ಕಲ್ಕತ್ತಾ ಶಾಖೆಯ ಬರೋಡ ಬ್ಯಾಂಕಿನ ಗ್ರಾಹಕ

ಆ) ಮಿಟ್ಟರ್—ಕಲ್ಕತ್ತಾ ಶಾಖೆಯ ಪಂಜಾಬ್ ನ್ಯಾಷನಲ್ ಬ್ಯಾಂಕಿನ ಗ್ರಾಹಕ

ಇ) ಅಮೀನ್—ಬರೋಡ ಬ್ಯಾಂಕಿನ ಅಧಿಕಾರಿ

ಈ) ಭಗವಾನ್‌ದಾಸ್—ಪಂಜಾಬ್ ಬ್ಯಾಂಕಿನ ಅಧಿಕಾರಿ

ವ್ಯವಹಾರ

13-6-39ರಂದು ಘೋಷ್ ಮಿಟ್ಟರ್‌ಗೆ 2 ರೇಖಿತ ಚೆಕ್ಕುಗಳನ್ನು ನೀಡಿದ (1,40,000 ಮತ್ತು 1,35,000 ರೂ.ಗಳು) ಮಿಟ್ಟರ್ ಇವುಗಳನ್ನು ಪಂಜಾಬ್ ಬ್ಯಾಂಕಿಗೆ ಹಾಜರುಪಡಿಸಿ ಓವರ್‌ಡ್ರಾಫ್ಟ್ ಸೌಲಭ್ಯ ಕೇಳಿದ. "ಮುಂತಾರೀಖಿನೊಂದಿಗೆ ಈ ಎರಡೂ ಚೆಕ್ಕುಗಳನ್ನು ಪ್ರಮಾಣೀಕರಿಸಿಕೊಂಡು ಬನ್ನಿ" ಎಂದು ಭಗವಾನ್‌ದಾಸ್ ಹೇಳಿದ. ಮಿಟ್ಟರ್ ಅಮೀನ್‌ನ ಬಳಿ ಬಂದು ಕೇಳಿದ. ಅಧಿಕಾರವಿಲ್ಲದೆ ಅಮೀನ್ ಮುಂತಾರೀಖಿನ ಚೆಕ್ಕುಗಳನ್ನು ಪ್ರಮಾಣೀಕರಿಸಿದ. ಓವರ್‌ಡ್ರಾಫ್ಟ್ ಮಂಜೂರಾಯಿತು. ಸಂಶಯಾತ್ಮಕವಾದ ವ್ಯವಹಾರಗಳನ್ನು ಗಮನಿಸಿದ ಬರೋಡ ಬ್ಯಾಂಕ್ ಅಮೀನನನ್ನು ಅಮಾನತ್ತಿನಲ್ಲಿರಿಸಿತು. ಇತ್ತಲಾಗಿ ಪಂಜಾಬ್ ಬ್ಯಾಂಕಿಗೆ ಹಣದ ಬಗ್ಗೆ ತೀವ್ರ ಆತಂಕ ಹಾಗೂ ಭಯ ಉಂಟಾಯಿತು. ಎರಡು ಚೆಕ್ಕುಗಳನ್ನು ಬರೋಡ ಬ್ಯಾಂಕಿಗೆ ಹಾಜರುಪಡಿಸಿದಾಗ ಘೋಷ್ ಖಾತೆ ವಿಳೂಕಾಲಾಣೆ ಶಿಲ್ಕು ತೋರಿಸುತ್ತಿತ್ತು. ವಿಚಾರಣೆ ಮತ್ತು ಮೇಲ್ಮನವಿ ನ್ಯಾಯಾಲಯಗಳಲ್ಲಿ ಇತ್ಯರ್ಥವಾಗದೆ ಪ್ರಕರಣ ಪ್ರಿವಿ ಕೌನ್ಸಿಲ್ ಮುಟ್ಟಿತು.

"ಪಂಜಾಬ್ ಬ್ಯಾಂಕ್ ಅಮೀನನ ಅಧಿಕಾರವನ್ನು ಖಾತ್ರಿಗೊಳಿಸಿಕೊಂಡ ಮೇಲೆ ಓವರ್‌ಡ್ರಾಫ್ಟ್ ಕೊಡಬೇಕಿತ್ತು. ಮುಂತಾರೀಖಿನ ಚೆಕ್ಕುಗಳಿಗೆ ಬರೋಡಾ ಬ್ಯಾಂಕಿನಿಂದ ಯಾವ ಪ್ರಾತಿನಿಧ್ಯವೂ ಇಲ್ಲ. ಎರಡೂ ಬ್ಯಾಂಕುಗಳ ನಡುವೆ ಯಾವ ಒಪ್ಪಂದವೂ ಇಲ್ಲ" ಎಂದು ನ್ಯಾಯಮೂರ್ತಿ ರೈಟ್ ತೀರ್ಪಿತ್ತರು. ಅಂದಿನಿಂದ ಪ್ರಮಾಣಿತ ಚೆಕ್ಕು ರೂಢಿಯಲ್ಲಿಲ್ಲ.

## ಪಾಸ್ ಪುಸ್ತಕ

ಪಾಸ್ ಪುಸ್ತಕದ ಬಗ್ಗೆ ಸಂಶಯ ಹಾಗೂ ಗೊಂದಲ ಉಂಟುಮಾಡುವ ಪ್ರಕರಣಗಳೇ ಹೆಚ್ಚಾಗಿವೆ. ಮಾನವನ ದೋಷಗಳೇ ಇದಕ್ಕೆ ಕಾರಣ. ಮಾನವ ಮಾಡುವ ತಪ್ಪುಗಳು ಪ್ರಕೃತಿಗೆ ಸಂಬಂಧಿಸಿದೆ ಎಂಬ ಸಿದ್ಧಾಂತವು ಸರ್ವಸ್ವೀಕೃತವಾಗಿದೆ. ಪಾಸ್ ಪುಸ್ತಕ ಅಂತಿಮ ನಿದರ್ಶನ ಸೂಚಿಸುವ ದಾಖಲೆಯೇ ಅಥವ ಇಲ್ಲವೇ ಎಂಬುದರ ಬಗ್ಗೆ ಚಕಮಕಿಯನ್ನು ನೋಡಬಹುದು.

1816ರಲ್ಲಿ ದೀವಾಯಾನ್ಸ್ ನೋಬಲ್ ಮೊಕದ್ದಮೆಯಲ್ಲಿ 'ಗ್ರಾಹಕನು ಯಾವಾಗ ಪಾಸ್ ಪುಸ್ತಕವನ್ನು ಪಡೆಯುವನೋ ಆಗಲೇ ಅದರಲ್ಲಿರುವ ಲೋಪದೋಷಗಳಾವುದಾದರೂ ಇದ್ದರೆ ಬ್ಯಾಂಕರನಿಗೆ ತಿಳಿಸಬೇಕು. ಗ್ರಾಹಕನು ಮೌನವಾಗಿದ್ದರೆ ಪುಸ್ತಕದಲ್ಲಿರುವ ನಮೂದುಗಳೆಲ್ಲ ಸರಿ

[15ನೇ ಪುಟ ನೋಡಿ]

## ಹತ್ತು ವರ್ಷ ಹಿಂದಿನ ಲೇಖನ

# ಬ್ಯಾಂಕಿಂಗ್ ಸಂಸ್ಕೃತಿ*

**ಬ್ಯಾಂಕಿಂಗ್ ಸಂಸ್ಕೃತಿ ಎಂಬುದೊಂದು ಇದೆಯೆ? ಇದರ ಸ್ವರೂಪ ಲಕ್ಷಣಗಳೇನು?**

***'ಬ್ಯಾಂಕಿಂಗ್ ಪ್ರಪಂಚ'ಕ್ಕೆ ಹತ್ತು ವರ್ಷಗಳು ತುಂಬಿವೆ. ಹತ್ತು ವರ್ಷ ಹಿಂದೆ (ಜೂನ್ 1980) ಮೊದಲನೆಯ ಸಂಚಿಕೆಯಲ್ಲಿ ಪ್ರಕಟವಾದ ಒಂದು ಲೇಖನವನ್ನು ಇಲ್ಲಿ ಪುನರ್ಮುದ್ರಿಸುತ್ತಿದ್ದೇವೆ.**

ಸಿ. ಎಸ್. ಶೇಷಾದ್ರಿ

ಅತಿ ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಬ್ಯಾಂಕಿಂಗ್ ವ್ಯವಸ್ಥೆ (ಲೇವಾದೇವಿಯ ರೂಪದಲ್ಲಿ) ಇದ್ದಿತೆಂದು ಹೇಳಬಹುದಾದರೂ, ಆಧುನಿಕ ವ್ಯವಸ್ಥಿತ ಬ್ಯಾಂಕಿಂಗ್ ಪದ್ಧತಿ ನಮ್ಮ ದೇಶದಲ್ಲಿ ಕೇವಲ ಒಂದು ಶತಮಾನದಷ್ಟೇ ಹಳೆಯದು! ಐರೋಪ್ಯ ವಾಣಿಜ್ಯ ಬ್ಯಾಂಕಿಂಗ್‌ನ ಪದ್ಧತಿಯನ್ನೇ ಭಾರತದಲ್ಲಿಯೂ ಅಂಗೀಕರಿಸಲಾಯಿತು. ಕಳೆದ ಕೆಲವು ದಶಕಗಳಲ್ಲಿ, ಅಂದರೆ ವಿಶೇಷವಾಗಿ ಎರಡನೆಯ ಮಹಾ ಯುದ್ಧದ ತರುವಾಯವಷ್ಟೆ, ಬ್ಯಾಂಕಿಂಗ್ ವಿಧಾನದಲ್ಲಿಯೂ ಮೂಲೋದ್ದೇಶಗಳಲ್ಲಿಯೂ ಗಮನಾರ್ಹ ಬದಲಾವಣೆಗಳಾದುವು.

ಭಾರತದಲ್ಲಿ ಕೂಡ ಈ ವೇಳೆಗೆ ಬ್ಯಾಂಕಿಂಗ್‌ನ ಮೂಲೋದ್ದೇಶಗಳಲ್ಲಿ ತೀವ್ರತರ ಬದಲಾವಣೆಗಳಾದುವು; ಹಾಗೂ ಬದಲಾದವುಗಳ ಬೆಳವಣಿಗೆಯೂ ಉಂಟಾಗಿದೆ. ಬ್ಯಾಂಕಿಂಗ್ ಭಾರತದಲ್ಲಿ ಹೆಚ್ಚು ಹೆಚ್ಚಾಗಿ ಪಸರಿಸಲು ಕಾಲಾವಕಾಶ ಬೇಕಿರುವುದಾದರೂ. ಸಾಮಾನ್ಯವಾಗಿ ನಗರ ಪ್ರದೇಶಗಳಲ್ಲಿ ಪ್ರಗತಿಯನ್ನು ಸಾಧಿಸಿದೆ. ಆದರೂ ಇಷ್ಟೇ ಸಾಲದು. ಈಗಲೂ ಕಛೇರಿಗಳಲ್ಲಿಯೂ, ಕಾರ್ಖಾನೆಗಳಲ್ಲಿಯೂ ದುಡಿಯುವ ನೌಕರರು ವೇತನಗಳನ್ನು ನೇರವಾಗಿ ಹಣದ ರೂಪದಲ್ಲೇ ಪಡೆಯಲಿಚ್ಛಿಸುತ್ತಾರೆ. ಬಹುತೇಕ ಮಂದಿ ಬ್ಯಾಂಕ್ ಖಾತೆಗಳನ್ನು ಹೊಂದಿಲ್ಲ. ಅಷ್ಟೇ ಅಲ್ಲ, ಹಣ ಪಾವತಿಯನ್ನು ಚೆಕ್ಕುಗಳ ಮುಖಾಂತರ ಸ್ವೀಕರಿಸಲು ಹಿಂದೇಟು ಹೊಡೆಯುತ್ತಾರೆ. ಇನ್ನು ಗ್ರಾಮಾಂತರಪ್ರದೇಶಗಳಲ್ಲಿ ಬ್ಯಾಂಕಿಂಗ್ ಕುರಿತು ಹೆಚ್ಚಿನ ಅರಿವು ಮೂಡಿಲ್ಲ. ಅನೇಕ ಬ್ಯಾಂಕುಗಳು ಗ್ರಾಮಾಂತರ ಶಾಖೆಗಳನ್ನು ಹೊಂದಿವೆಯಾದರೂ, ಆ ಶಾಖೆಗಳು ಇನ್ನೂ ಸರಿಯಾದ ಆರ್ಥಿಕ ದೃಷ್ಟಿಕೋನ ಹೊಂದಿಲ್ಲ. ಗ್ರಾಮೀಣ ಅರ್ಥವ್ಯವಸ್ಥೆಯ ಮೇಲೆ ಅವುಗಳ ಪರಿಣಾಮ ಆಗಿಲ್ಲ.

ನಾನು ಬ್ಯಾಂಕಿಂಗ್ ಸಂಸ್ಕೃತಿಯನ್ನು ಕುರಿತು ಹೇಳುವಾಗ ನನ್ನ ಗಮನದಲ್ಲಿರುವುದು ಕೇವಲ ಹಣ ಜಮಾವಣೆ ಮತ್ತು ಸಾಲ ನೀಡಿಕೆಯಷ್ಟೇ ಅಲ್ಲ. ಜನರು ತಮ್ಮ ಎಲ್ಲ ಹಣಕಾಸಿನ ವ್ಯವಹಾರಗಳನ್ನು ಬ್ಯಾಂಕುಗಳ ಮುಖಾಂತರವೇ ನಡೆಸಬೇಕೆಂಬ ಕಡೆಗೇ ಹೆಚ್ಚು ಒತ್ತು ಕೊಡುತ್ತಿದ್ದೇನೆ. ಹಣವನ್ನು ಜಮಾ ಮಾಡುವವರು, ರವಾನಿಸುವವರು, ಚೆಕ್ಕುಗಳ ಮುಖಾಂತರ ಹಣ ನೀಡುವವರು, ಬ್ಯಾಂಕು ಖಾತೆಗಳ ಮೂಲಕವೇ ಇವುಗಳನ್ನು ನಡೆಸುವುದು ಸಾಧ್ಯ. ಕೇವಲ ಚಿಲ್ಲರೆ ವೆಚ್ಚದ ಬಾಬ್ತುಗಳಿಗೆ ಮಾತ್ರ ನಗದು ಹಣವನ್ನು ಬಳಸತಕ್ಕದ್ದು.

ಭಾರತೀಯ ಸಂಸ್ಕೃತಿ ಹಲವಾರು ಸಂಸ್ಕೃತಿಗಳ ಸಮ್ಮಿಶ್ರಣ. ತೀರ ಹಳೆಯ ಆದಿವಾಸಿಗಳಿಂದ ಹಿಡಿದು ಅತ್ಯಾಧುನಿಕ ಸಂಸ್ಕೃತಿಯ ಜನರ ವರೆಗೆ ಧರ್ಮ, ಆಹಾರವಿಧಾನ ಮತ್ತು ಸಾಮಾಜಿಕ ಆರ್ಥಿಕ ನಡತೆಯಲ್ಲಿ ಭಿನ್ನತೆ ಇದೆ. ಈ ಭೇದಗಳಿಂದಾಗಿ ಅಲ್ಲಲ್ಲಿ ಘರ್ಷಣೆಗೆ ಅವಕಾಶವಾದರೂ ಒಟ್ಟಿನಲ್ಲಿ ಸಹಜೀವನದ ನೀತಿ, ಭಿನ್ನತೆಯಲ್ಲಿ ಏಕತೆ, ನಮ್ಮ ದೇಶದ ವೈಶಿಷ್ಟ್ಯವಾಗಿದೆ. ಆರ್ಥಿಕ ರಂಗದಲ್ಲಿ ಬ್ಯಾಂಕಿಂಗು ನಗರ ಪ್ರದೇಶಗಳಲ್ಲಿ ಬಿಂದುವಿನ ಸಂಸ್ಕೃತಿಯಾಗಿ ರೂಪುಗೊಳ್ಳುತ್ತಿದೆ. ಆದರೆ ಗ್ರಾಮೀಣ ಪ್ರದೇಶಗಳಲ್ಲಿ ಅದು ಇನ್ನೂ 'ಸಾಲ ನೀಡಿಕೆಯ' ಸಂಸ್ಕೃತಿಯಾಗಿಯೇ ಮುಂದುವರಿದಿದೆ. ನಮ್ಮ ಹಳ್ಳಿಗಾಡುಗಳಲ್ಲಿ ವಾಸಿಸುವ ಜನರಲ್ಲಿ ಕಡಿಮೆ ಉತ್ಪನ್ನ ಇರುವುದಾದರೂ, ಈ ಹಣದ ಬಹಳಂಶ ಎಲ್ಲ ಬಗೆಯ ಉತ್ಪಾದಕತೆಯನ್ನು ಹೊಂದಿಲ್ಲ.

ನನ್ನ ದೃಷ್ಟಿಯಲ್ಲಿ ನಮ್ಮ ಗ್ರಾಮಾಂತರ ಅಭಿವೃದ್ಧಿಗೆ ಹಳ್ಳಿಗರ ಜೀವನಮಟ್ಟದ ಸುಧಾರಣೆಗೆ ಮಾರ್ಗೋಪಾಯವೊಂದೆ. ಅದೆಂದರೆ

---

## ಚಾರಿತ್ರಿಕ ಮೊಕದ್ದಮೆಗಳು

[14ನೇ ಪುಟದಿಂದ ಮುಂದುವರಿದುದು]

ಯಾಗಿವೆ ಎಂದರ್ಥ'' ಎಂದು ಸರ್ ವಿಲಿಯಂ ಗ್ರಾಂಟ್ ಹೇಳಿಕೆಯನ್ನಿತ್ತರು. ಇದು ಸರಿಯಲ್ಲವೆಂದು ಅನಂತರ ಬಂದ ಮೊಕದ್ದಮೆಗಳಲ್ಲಿ ನ್ಯಾಯಾಲಯಗಳು ಅಭಿಪ್ರಾಯಪಟ್ಟುವು. ಮೋರ್ಗಾನ್ ವಿ ಯು. ಎಸ್. ಮಾರ್ಗೇಜ್ ಮತ್ತು ಟ್ರಸ್ಟ್ ವ್ಯಾಜ್ಯದಲ್ಲಿ ಪಾಸ್‌ಪುಸ್ತಕವನ್ನು ಪರೀಕ್ಷಿಸಿ ದೋಷಗಳನ್ನು ವರದಿ ಮಾಡುವುದು ಗ್ರಾಹಕನ ಕರ್ತವ್ಯ ಎಂಬ ಹೇಳಿಕೆ ಹೊರಬಿತು.- ಇದಕ್ಕೆ ವಿರುದ್ಧವಾಗಿ ಚಾಟರ್‌ಟನ್ ಮತ್ತು ಲಂಡನ್ ಕೌಂಟಿ ಬ್ಯಾಂಕ್ ವ್ಯಾಜ್ಯದಲ್ಲಿ.

''ಪಾಸ್‌ಪುಸ್ತಕವನ್ನು ಗ್ರಾಹಕನು ಪರೀಕ್ಷಿಸಲೇಬೇಕೆಂಬುದು ಸರಿಯಲ್ಲ. ಯಾವ ಆಕ್ಷೇಪಣೆ ಇಲ್ಲದೆ ಪಾಸ್‌ಪುಸ್ತಕವನ್ನು ಬ್ಯಾಂಕಿಗೆ ಹಾಜರುಪಡಿಸಿದರೆ 'ಎಲ್ಲಾ ನಮೂದುಗಳನ್ನು ಗ್ರಾಹಕನು ಒಪ್ಪಿಕೊಂಡಿದ್ದಾನೆ' ಎಂದು ಬ್ಯಾಂಕರನು ಭಾವಿಸಕೂಡದು'' ಎಂಬ ಅಭಿಪ್ರಾಯ ಬಂದಿತು.

i ಪಾಸ್‌ಪುಸ್ತಕ ನಿರ್ಣಾಯಕ ದಾಖಲೆಯಲ್ಲ.

ii ಪ್ರಥಮ ನೋಟದ ನಿದರ್ಶನವಾದರೂ ಅಂತಿಮ ನಿದರ್ಶನವಲ್ಲ.

iii ನಮೂದುಗಳ ಪಕ್ಕದಲ್ಲಿ √ ಗುರುತು ಮಾಡಿದ್ದರೆ, ಗ್ರಾಹಕನು ಪಾಸ್‌ಪುಸ್ತಕವನ್ನು ಪರಿಶೀಲಿಸಿದ್ದಾನೆ. ಇದೊಂದು ಒಳ್ಳೆಯ ರೂಢಿ.

vi ಇದು ಸಂಪೂರ್ಣವಾಗಿ ಗ್ರಾಹಕನ ಸ್ವತ್ತು. ಬ್ಯಾಂಕಿನ ಜವಾಬ್ದಾರಿ ಹೆಚ್ಚಾಗಿದೆ.

v ಪಾಸ್‌ಪುಸ್ತಕದ ಲೋಪದೋಷಗಳನ್ನು ಸರಿಯಾದ ಸಂಪರ್ಕದಿಂದ ಸರಿಮಾಡಬಹುದು.

ಮುಂತಾದ ಹೇಳಿಕೆಗಳು ಮತ್ತು ಅಭಿಪ್ರಾಯಗಳು ಅನೇಕ ಮೊಕದ್ದಮೆಗಳಲ್ಲಿ ಮೂಡಿಬಂದವು. ಉದಾ: 1 ಬ್ಯಾಂಕ್ ಆಫ್ ಇಂಗ್ಲೆಂಡ್ ವಿ ವ್ಯಾಗ್ಲಿಯಾನೋ ಸಹೋದರರು, 2 ಹಾಲೆಂಡ್ ವಿ ಮ್ಯಾನ್‌ಚೆಸ್ಟರ್ ಅಂಡ್ ಲಿವರ್‌ಪೂಲ್ ಡಿಸ್ಟ್ರಿಕ್ಟ್ ಬ್ಯಾಂಕಿಂಗ್, 3 ಕೆಪ್ಪಿಗಲಾ ರಬ್ಬರ್ ಎಸ್ಟೇಟ್ ವಿ ದಿ ನ್ಯಾಷನಲ್ ಬ್ಯಾಂಕ್ ಆಫ್ ಇಂಡಿಯಾ, 4 ಬ್ರಿಟಿಷ್ ಮತ್ತು ನಾರ್ತ್ ಯುರೋಪಿಯನ್ ಬ್ಯಾಂಕ್ ವಿ ಜಾಲ್‌ಸ್ಟೀನ್ 5 ಸ್ಕೈರಿಂಗ್ ವಿ ಗ್ರೀನ್‌ವುಡ್. ●

ಬ್ಯಾಂಕಿಂಗ್ ಪದ್ಧತಿ. ಬ್ಯಾಂಕಿಂಗ್ ಸಂಸ್ಕೃತಿ ಗ್ರಾಮೀಣ ಸಂಸ್ಕೃತಿಯ ಒಂದು ಭಾಗವಾಗಿ ರೂಪುಗೊಳ್ಳಬೇಕು. ಬ್ಯಾಂಕಿಂಗ್ ವ್ಯವಸ್ಥೆಯನ್ನು ಹಚ್ಚಿಕೊಳ್ಳಲು ಹಳ್ಳಿಗರಿಗೆ ಅನೇಕ ತೊಂದರೆಗಳು, ಸಮಸ್ಯೆಗಳು ಇರುವುದು ನಿಸ್ಸಂಶಯ. ಓದು ಬರಹ ಬಾರದಿರುವುದು, ಶಹರದ ಜನರ ಬಗ್ಗೆ ಅಪನಂಬಿಕೆ, ಪರಂಪರಾಗತವಾಗಿ ಅವರು ಸ್ಥಳೀಯ ಲೇವಾದೇವಿಗಾರರೊಂದಿಗೆ ಹೊಂದಿರುವ ಸಂಪರ್ಕ —ಇವು ಒಂದು ಕಾರಣವಾದರೆ, ಬ್ಯಾಂಕುಗಳ ಕಾರ್ಯವಿಧಾನದಲ್ಲಿಯ ಕ್ಲಿಷ್ಟತೆ ಅವರ ಅರಿವಿನ ಅಳವಿನೊಳಗೆ ಬಾರದಿರುವುದು ಇನ್ನೊಂದು ಕಾರಣ.

ಇತ್ತೀಚಿನ ವರ್ಷಗಳಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಬ್ಯಾಂಕಿಂಗ್ ಪದ್ಧತಿಯ ವಿಸ್ತರಣೆಯ ಬಗ್ಗೆ ಹೆಚ್ಚಿನ ಮುತುವರ್ಜಿ ವಹಿಸಲಾಗಿದೆ. ಗ್ರಾಮಾಂತರ ಶಾಖೆಗಳನ್ನು ತೆರೆಯುವುದೂ ಅಂತೆಯೇ ಗ್ರಾಮೀಣ ಬ್ಯಾಂಕುಗಳ ಸ್ಥಾಪನೆಯೂ ಈ ದಿಶೆಯಲ್ಲಿ ಹೊಸ ಪ್ರಯತ್ನಗಳಾಗಿವೆ. ಈ ಪ್ರಯತ್ನಗಳೆಲ್ಲ ಗ್ರಾಮೀಣ ಜನತೆಯ ಮೇಲೆ ಆಂಶಿಕ ಪರಿಣಾಮ ಬೀರಿವೆಯೇ ಹೊರತು ಬ್ಯಾಂಕಿಂಗ್ ಸಂಸ್ಕೃತಿಯಾಗಿ, ಗ್ರಾಮೀಣ ಅರ್ಥವ್ಯವಸ್ಥೆಯ ಒಂದು ಅಂಗವಾಗಿ ಇನ್ನೂ ಮಾರ್ಪಟ್ಟಿಲ್ಲ. ಗ್ರಾಮಾಭಿವೃದ್ಧಿಯ ಓಟವನ್ನು ಹೆಚ್ಚಿಸುವುದು ಅವಶ್ಯವಿರುವಂತೆಯೇ ಗ್ರಾಮಾಂತರ ಬ್ಯಾಂಕಿಂಗ್‌ನ ಸುಧಾರಣೆ ಗ್ರಾಮಗಳ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರ ವಹಿಸಬಲ್ಲುದು.

ಬ್ಯಾಂಕಿಂಗ್ ಶಾಖೆಗಳ ಗ್ರಾಮಾಂತರ ವಿಸ್ತರಣೆಗೆ ಮುಖ್ಯ ತೊಡಕೆಂದರೆ, ಸದ್ಯದ ಪರಿಸ್ಥಿತಿಯಲ್ಲಿ, ಅವು ಆರ್ಥಿಕವಾಗಿ ಲಾಭದಾಯಕವಾಗಿಲ್ಲ. ಹೆಚ್ಚಿನ ಇಂಥ ಬ್ಯಾಂಕುಗಳಿಗೆ ನೇರ ಅಥವಾ ಅಪ್ರತ್ಯಕ್ಷ ಸಹಾಯಧನ ವ್ಯವಸ್ಥೆಯಿಂದ ನಡೆಸಲಾಗುತ್ತಿದೆ. ನಗರ ಪ್ರದೇಶಗಳಲ್ಲೇ ಅಭಿವೃದ್ಧಿ ಹೊಂದಿ, ವ್ಯಾಪಾರ ವಾಣಿಜ್ಯ ಕೈಗಾರಿಕೆಗಳಿಗೆ ಸಹಾಯ ನೀತಿಯನ್ನು ಅವಲಂಬಿಸಿದ ಈ ಬ್ಯಾಂಕುಗಳ ನಿರ್ವಹಣ ವೆಚ್ಚ ಸಹಜವಾಗಿಯೂ ಹೆಚ್ಚಿರುವುದರಿಂದ ಗ್ರಾಮ ಪ್ರದೇಶಗಳಿಗೆ ಇದು ಹೊರೆಯಾಗುವುದು. ಈ ತೊಡಕು ನಿವಾರಣೆಯಾಗಬೇಕಾದರೆ, ಗ್ರಾಮೀಣ ಅರ್ಥವ್ಯವಸ್ಥೆಗೆ ಹೊಂದಾಣಿಕೆಯಾಗಬಲ್ಲ ದರದಲ್ಲಿ ನಿರ್ವಹಣ ವೆಚ್ಚದ ಬ್ಯಾಂಕುಗಳ ಸ್ಥಾಪನೆಯಾಗಬೇಕು; ಇಲ್ಲವೇ ವೆಚ್ಚವನ್ನು ಸರಿಯಾಗಿಸಬಲ್ಲಂತೆ ವ್ಯವಹಾರದಲ್ಲಿ ಹೆಚ್ಚಳವಾಗಬೇಕು.

ಇನ್ನು ಹಳ್ಳಿಗರ ತಿಳಿವಳಿಕೆಯ ಮಟ್ಟಕ್ಕೆ ಬ್ಯಾಂಕಿಂಗ್ ವ್ಯವಹಾರವನ್ನು ಸರಳಗೊಳಿಸುವುದು ಅವಶ್ಯವಿದೆ; ಇಲ್ಲವೆ ಅವರ ತಿಳಿವಳಿಕೆಯ ಮಟ್ಟ ಹೆಚ್ಚಿಸಲು ಪ್ರಯತ್ನಿಸಬಹುದು. ಈ ಕೆಲಸವನ್ನು ವಾಣಿಜ್ಯ ಬ್ಯಾಂಕುಗಳಲ್ಲಿ ಮಾಡಲಾಗದಿದ್ದಲ್ಲಿ, ಹೊಸ ಗ್ರಾಮೀಣ ಬ್ಯಾಂಕ್ ವ್ಯವಸ್ಥೆಯನ್ನು ರೂಢಿಸುವುದು ಅವಶ್ಯವಿದೆ. ವಾಣಿಜ್ಯ ಬ್ಯಾಂಕುಗಳು ಆರ್ಥಿಕ ಸಹಾಯದಲ್ಲಿ ವಿಶೇಷವಾಗಿ ಗಳಿಸಿರುವ ಪರಿಣತಿಯನ್ನು ಈ ಬ್ಯಾಂಕುಗಳಿಗೆ ದೊರಕಿಸಬೇಕು. ಸಹಕಾರಿ ಬ್ಯಾಂಕುಗಳು ಸಹ ಗ್ರಾಮಗಳಿಗಿಂತ ನಗರಗಳಲ್ಲಿ ಹೆಚ್ಚು ಯಶಸ್ವಿಯಾಗಿವೆ. ಇನ್ನು ಗ್ರಾಮೀಣ ಬ್ಯಾಂಕುಗಳು ತಮ್ಮ ಪರಿಣಾಮಕಾರಿತ್ವವನ್ನು ಇನ್ನೂ ಸಿದ್ಧಪಡಿಸಬೇಕಾಗಿದೆ. ಸದ್ಯದ ಆವಶ್ಯಕತೆ ಎಂದರೆ, ವಿವಿಧ ವಿಧಾನಗಳಿಂದ ಬ್ಯಾಂಕಿಂಗ್ ಸಂಸ್ಕೃತಿಯನ್ನು ಭಾರತೀಯ ಸಂಸ್ಕೃತಿಯಲ್ಲಿ ವಿಸ್ತರಿಸುವ ಪ್ರಯೋಗಗಳನ್ನು ಮಾಡತಕ್ಕದ್ದು ಮತ್ತು ಆರ್ಥಿಕ ಏಳಿಗೆಗೆ ಒತ್ತುಕೊಡತಕ್ಕದ್ದು.

ಸರ್ಕಾರ ಜಾರಿಮಾಡಿರುವ ಗ್ರಾಮೀಣ ಋಣ ವಿಮೋಚನೆಯ ಕಾನೂನು ಯಶಸ್ವಿಯಾಗಬೇಕಾದರೆ ಮುಲ್ಲಾನಿಗಳ ವ್ಯವಸ್ಥೆಗೆ ಪ್ರತಿಯಾದ ಯೋಗ್ಯ ಹೊಸ ವ್ಯವಸ್ಥೆ ಜಾರಿಗೆ ಬರಬೇಕು. ಇಲ್ಲದಿದ್ದಲ್ಲಿ, ಆ ಹಳ್ಳಿಗರಿಗೆ ಇದ್ದ ಸಾಲದ ವ್ಯವಸ್ಥೆಯನ್ನು ಕಿತ್ತುಕೊಂಡಂತಾಗುತ್ತದೆ. ನಗರಗಳಲ್ಲಿ ಕೂಡ ವಾಣಿಜ್ಯ, ವ್ಯಾಪಾರ, ಕೈಗಾರಿಕೆಗಳು, ಸ್ವತಃ ಉದ್ಯೋಗ ಹೊಂದಿರುವವರು ಈ ಕ್ಷೇತ್ರಗಳಿಗಷ್ಟೇ ಬ್ಯಾಂಕಿಂಗ್ ಸೀಮಿತವಾಗಿದೆ. ಕೈಗಾರಿಕೆಗಳಲ್ಲಿ, ಕಛೇರಿಗಳಲ್ಲಿ ಕೆಲಸ ಮಾಡುವ ನೌಕರವರ್ಗ ಇದರಲ್ಲಿ ಹೆಚ್ಚಾಗಿ ಸೇರಿಲ್ಲ. ಅವರೂ ಬ್ಯಾಂಕಿಂಗ್ ವ್ಯವಸ್ಥೆಯನ್ನು ಸ್ವೀಕರಿಸುವುದು ಅವಶ್ಯವಿದೆ. ಇದನ್ನು ಸಾಧಿಸಬೇಕಾದರೆ ಅವರಿಗೆ ಬ್ಯಾಂಕ್ ಖಾತೆಗಳ ಉಪಯುಕ್ತತೆಯನ್ನು ಮನಗಾಣಿಸಬೇಕು.

ಇಲ್ಲಿ ಕೆಲವು ಸಲಹೆಗಳಿವೆ :

1 ವಿಸ್ತರಣಾಧಿಕಾರಿಗಳ ನೇಮಕ : ಪಟ್ಟಣಗಳಿಗೂ ಗ್ರಾಮಗಳಿಗೂ ಅನ್ವಯವಾಗುವಂತೆ ಬ್ಯಾಂಕುಗಳು ವಿಸ್ತರಣಾಧಿಕಾರಿಗಳನ್ನು ಹೊಂದಿರಬೇಕು. ಇವರ ಮುಖ್ಯ ಕೆಲಸವೆಂದರೆ ಕೆಲಸಗಾರರನ್ನೂ ಅವರ ಮನೆಯವರನ್ನೂ ಸಂದರ್ಶಿಸಿ ಬ್ಯಾಂಕಿಂಗ್‌ನ ಉಪಯುಕ್ತತೆಯನ್ನು ವಿವರಿಸಿ ಅದರ ಪ್ರಯೋಜನವನ್ನು ಪಡೆಯುವಂತೆ ಮನವರಿಕೆಮಾಡಿಕೊಡತಕ್ಕದ್ದು. ಅದೇ ಪ್ರಕಾರವಾಗಿ, ಜನರಿಗಿರುವಂತಹ ಸಮಸ್ಯೆಗಳ ಕುರಿತೂ ಅವರು ಬ್ಯಾಂಕಿಗೆ ವರದಿ ಮಾಡುತ್ತಿರಬೇಕು. ಅವರಿಗೆ ಕಛೇರಿಯ ಕೆಲಸವಿರತಕ್ಕದ್ದಲ್ಲ. ಹೊಸ ಖಾತೆಗಳ ಸಂಖ್ಯೆಗಳಲ್ಲಿ ಅವರ ಕಾರ್ಯದಕ್ಷತೆ ವ್ಯಕ್ತವಾಗಬೇಕು. ಬ್ಯಾಂಕಿನ ವ್ಯವಸ್ಥಾಪಕರೆಂದು ಬ್ಯಾಂಕ್ ಅಧಿಕಾರಿಗಳನ್ನು ನೇಮಿಸುವ ಮೊದಲು ಇಂತಹ ಅನುಭವವನ್ನು ಪ್ರತಿಯೊಬ್ಬ ಅಧಿಕಾರಿಗೆ ನೀಡುವ ಬಗ್ಗೆ ಆಲೋಚಿಸಬೇಕು. ಈಗಿರುವ ಪದ್ಧತಿಯೆಂದರೆ, ಬ್ಯಾಂಕ್ ವ್ಯವಸ್ಥಾಪಕರು ಕೇವಲ ಮೂಲ ಬಂಡವಾಳವುಳ್ಳ ದೊಡ್ಡ ಕುಳಗಳನ್ನೇ ಹಿಡಿಯುವುದು ಅಥವಾ ಹಣದ ಬಾಕಿ ಬರಬೇಕಾದವರನ್ನು ಹಿಡಿಯುವುದು. ವ್ಯಕ್ತಿಯ ಮತ್ತು ಸಾರ್ವಜನಿಕ ಸಂಪರ್ಕದ ಅಭಾವವಿದೆ.

2 ಕಾಯಿದೆಯನ್ನು ಚಲಾಯಿಸಿ, ರೂ. 50 ಮತ್ತು ಹೆಚ್ಚಿನ ಹಣ ಪಾವತಿಯನ್ನು ಚೆಕ್ಕುಗಳ ಮುಖಾಂತರವೇ ಮಾಡುವಂತೆ ಮಾಡಬೇಕು. ನೌಕರ ವರ್ಗದ ವೇತನ ಪಾವತಿ ಬ್ಯಾಂಕ್ ಖಾತೆಗೇ ಆಗಬೇಕು. ಇದಕ್ಕೆ ಆಕರ್ಷಣೆಯಾಗಿ ಮಾಲೀಕ ವರ್ಗ, ನೌಕರರ ವೇತನದ 50%ರಷ್ಟು ಹೆಚ್ಚುವರಿ ಸಾಲಕ್ಕೆ ಗ್ಯಾರಂಟಿ ನೀಡಬಹುದು.

3 ಬ್ಯಾಂಕುಗಳು ಸಾಕಷ್ಟು ದಕ್ಷ ಮತ್ತು ವಿನಯಪೂರ್ವಕ ಸೇವೆಯನ್ನು ತಮ್ಮ ಗ್ರಾಹಕರಿಗೆ ನೀಡುವಲ್ಲಿ ಪರಿಣತಿಯನ್ನು ತೋರಿಸಬೇಕು. ●

# ಬ್ಯಾಂಕುಗಳಲ್ಲಿ ಕನ್ನಡದ ಬಳಕೆ

**ಸಮನ್ವಯ ಸಮಿತಿಯ ಆಶ್ರಯದಲ್ಲಿ ಏಪ್ರಿಲ್ ೨೭ರಿಂದ ಮೇ ೩ರ ವರೆಗೆ ಕೋಲಾರದಲ್ಲಿ ಏರ್ಪಡಿಸಿದ್ದ ಬ್ಯಾಂಕಿಂಗ್ ಕಮ್ಮಟದಲ್ಲಿ ಮಾಡಿದ ಭಾಷಣ.**

**ಎಸ್. ಎನ್. ಸುಬ್ಬಣ್ಣ**

ಅಧಿಕಾರಿ, ಅಧಿಕೃತ ಭಾಷಾ ವಿಭಾಗ
ಭಾರತೀಯ ಸ್ಟೇಟ್ ಬ್ಯಾಂಕ್
ಪ್ರಧಾನ ಕಛೇರಿ, ಬೆಂಗಳೂರು

ಒಂದು ನಾಡಿನ, ದೇಶದ ಏಳಿಗೆಗೆ ಅಲ್ಲಿನ ಆರ್ಥಿಕ ಪರಿಸ್ಥಿತಿ ಚೆನ್ನಾಗಿರಬೇಕು. ಆರ್ಥಿಕ ಸ್ಥಿತಿ ಎಲ್ಲಿ ಸರಿ ಇರುತ್ತದೆಯೋ ಅಲ್ಲಿನ ಇತರ ಸ್ಥಿತಿಗಳೂ ಚೆನ್ನಾಗಿರುವುದೆಂದೇ ನಂಬಿಕೆ. ಆರ್ಥಿಕ ನೀತಿಯನ್ನು ಸರಿಯಾಗಿ ಅನುಸರಿಸಿದರೆ, ಅದು ಸರಿಯಾಗಿ ಜನರಲ್ಲಿ ಬೆರೆತು, ಜನರು ಅದನ್ನು ಸರಿಯಾಗಿ ತಿಳಿದುಕೊಂಡು ವ್ಯವಹರಿಸಬೇಕು. ಅಂದಮೇಲೆ ಅದು ಅಲ್ಲಿನ ಜನರು ಆಡುವ ಭಾಷೆಯಲ್ಲಿರುವುದೇ ಉತ್ತಮ. ಆದ್ದರಿಂದ ಕನ್ನಡ ನಾಡಿನಲ್ಲಿ ಆರ್ಥಿಕ ನೀತಿಯನ್ನು ಸರಿಯಾಗಿ ಪಾಲಿಸಬೇಕಾದರೆ, ಅಂದರೆ ಸಾಮಾನ್ಯ ಪ್ರಜೆ ಬ್ಯಾಂಕಿನಲ್ಲಿ ವ್ಯವಹರಿಸಬೇಕಾದರೆ, ಅವರ ವ್ಯವಹಾರವನ್ನು ಕನ್ನಡದಲ್ಲೇ ಮಾಡಿದರೆ ಅನುಕೂಲ. ಬ್ಯಾಂಕುಗಳಲ್ಲಿ ಕನ್ನಡದ ಬಳಕೆ ಎಷ್ಟರ ಮಟ್ಟಿಗೆ ಇದೆ ಎಂದು ತಿಳಿಯುವುದೇ ಈ ಲೇಖನದ ಉದ್ದೇಶ.

ಕನ್ನಡದ ಬಳಕೆಯ ಬಗ್ಗೆ ತಿಳಿಯುವ ಮೊದಲು ಭಾಷೆಯ ಬಳಕೆ ಮತ್ತು ಸಂವಿಧಾನದಲ್ಲಿ ಭಾಷೆಯ ಸ್ಥಾನದ ಬಗ್ಗೆ ತಿಳಿಯುವುದು ಉಚಿತ ಎಂದು ನನ್ನ ಭಾವನೆ. ನಮ್ಮ ಸಂವಿಧಾನದಲ್ಲಿ ಭಾಷೆಯ ಬಳಕೆ ಯಾವ ರೀತಿ ಇರಬೇಕು ಎಂಬುದನ್ನು ಪ್ರಸ್ತಾಪಿಸಲಾಗಿದೆ. ನಮ್ಮ ಸಂವಿಧಾನದ ಹದಿನೇಳನೆ ಭಾಗ ಕೇಂದ್ರ ಹಾಗೂ ರಾಜ್ಯಗಳ ಅಧಿಕೃತ ಭಾಷೆಗಳಿಗೆ ಸಂಬಂಧಿಸಿದ್ದಾಗಿದೆ. ಇಲ್ಲಿರುವ ಎರಡು ಅಧ್ಯಾಯಗಳಲ್ಲಿ ಒಂದು ಒಕ್ಕೂಟದ ಅಧಿಕೃತ ಭಾಷೆಗೂ, ಇನ್ನೊಂದು ರಾಜ್ಯಗಳ ಅಧಿಕೃತ ಭಾಷೆಗೂ ಮೀಸಲಾಗಿವೆ.

ಭಾರತಕ್ಕೆ ಸ್ವಾತಂತ್ರ್ಯ ಬಂದ ಅನಂತರ ದೇಶಕ್ಕೆ ಒಂದು ಅಧಿಕೃತ ಭಾಷೆ ಇರಬೇಕೆಂಬ ಇಚ್ಛೆಯಿಂದ ಹೆಚ್ಚು ಜನ ಮಾತನಾಡುವ ಹಿಂದಿಯನ್ನೇ ಒಕ್ಕೂ

ಟದ ಅಧಿಕೃತ ಭಾಷೆಯನ್ನಾಗಿ ಮಾಡಬೇಕೆಂದು ನಿರ್ಣಯಿಸಲಾಯಿತು. 1963ರಲ್ಲಿ ಅಧಿಕೃತ ಭಾಷಾಕಾಯಿದೆ ಜಾರಿಗೆ ಬಂದಿತು. ಅನಂತರ 1976ರಲ್ಲಿ ಅಧಿಕೃತ ಭಾಷಾ ನಿಯಮಗಳು ರೂಪಿತವಾದುವು. ಈ ನಿಯಮಗಳಂತೆ ಕೇಂದ್ರ ಸರ್ಕಾರದ ನಿಯಂತ್ರಣಕ್ಕೆ ಸೇರಿದ ಎಲ್ಲ ಸಂಸ್ಥೆಗಳ ಆದೇಶಗಳು, ನಿರ್ಣಯಗಳು, ನಿಯಮಗಳು, ಪತ್ರಿಕಾ ಪ್ರಕಟಣೆಗಳು, ಕರಾರುಗಳು, ವರದಿಗಳು ಹಿಂದಿ ಮತ್ತು ಇಂಗ್ಲಿಷ್‌ನಲ್ಲಿರಬೇಕು. ಅಲ್ಲದೆ ದೇಶವನ್ನು ಮೂರು ಭಾಗಗಳನ್ನಾಗಿ ವಿಂಗಡಿಸಿ ಪರಿಗಣಿಸಲಾಯಿತು. ಅದು ಈ ರೀತಿ ಇದೆ :

ಅ ಹಿಂದಿ ಮಾತನಾಡುವ ಪ್ರದೇಶಗಳು, ಅಂದರೆ, ಬಿಹಾರ, ಉತ್ತರಪ್ರದೇಶ, ಮಧ್ಯಪ್ರದೇಶ, ರಾಜಾಸ್ಥಾನ, ಹರ್ಯಾಣ ಮತ್ತು ದೆಹಲಿ ಕೇಂದ್ರಾಡಳಿತ ಪ್ರದೇಶ.

ಒ ಗುಜರಾತ್, ಪಂಜಾಬ್, ಮಹಾರಾಷ್ಟ್ರ, ಅಂಡಮಾನ್ ನಿಕೋಬಾರ್ ದ್ವೀಪಗಳು, ಚಂಡೀಗಢ ರಾಜ್ಯ, ಹೆಚ್ಚು ಹಿಂದಿ ಮಾತನಾಡುವ ಪ್ರದೇಶ ಹಾಗೂ ಹಿಂದಿ ತಿಳಿದುಕೊಳ್ಳುವ ರಾಜ್ಯಗಳು.

ಇ ಮೇಲೆ ಹೇಳಿದ ಪ್ರದೇಶಗಳನ್ನು ಬಿಟ್ಟು ಉಳಿದ ರಾಜ್ಯಗಳು.

ಹಿಂದಿಯನ್ನು ದೇಶದ ಎಲ್ಲಾ ಕಡೆಯೂ ಉಪಯೋಗಿಸುವಂತೆ ಕೇಂದ್ರ ಸರ್ಕಾರ ಮತ್ತು ಭಾರತದ ರಿಸರ್ವ್ ಬ್ಯಾಂಕು ಹಲವಾರು ಕಾರ್ಯಕ್ರಮವನ್ನು ರೂಪಿಸಿಕೊಂಡಿವೆ. ಬ್ಯಾಂಕುಗಳ ಪ್ರಧಾನ ಕಛೇರಿಯಲ್ಲಿ ಅಧಿಕೃತ ಭಾಷಾ ವಿಭಾಗವನ್ನು ತೆರೆಯಲಾಗಿದೆ. ಈ ವಿಭಾಗ ತನ್ನ ವ್ಯಾಪ್ತಿಯಲ್ಲಿ ಬರತಕ್ಕ ಎಲ್ಲ ಕಛೇರಿಗಳಲ್ಲಿ ಹಿಂದಿಯನ್ನು ಹೆಚ್ಚು ಹೆಚ್ಚು ಬಳಕೆಗೆ ತರುವ ಯೋಜನೆಗಳನ್ನು ಹಾಕುವುದು. ಮೂರು ತಿಂಗಳಿಗೊಮ್ಮೆ ಈ ಕಾರ್ಯ ಯಾವ ರೀತಿ ಮುಂದುವರಿಯುತ್ತಿದೆ ಎಂಬುದನ್ನು ಪರಿಶೀಲಿಸಲು ವರದಿಯನ್ನು ಕೊಡುವುದು ಮುಖ್ಯ ಕೆಲಸ. ಇದಲ್ಲದೆ ಹಿಂದಿ ಗೊತ್ತಿಲ್ಲದವರಿಗೆ ಹಿಂದಿ ತರಗತಿಗಳನ್ನು ನಡೆಸುವುದು, ಅನಂತರ ಅದರ ಪರೀಕ್ಷೆಗೆ ಹಣವನ್ನು ಕಟ್ಟುವುದು, ಪರೀಕ್ಷೆಯಲ್ಲಿ ಉತ್ತೀರ್ಣರಾದವರಿಗೆ ಉತ್ತೇಜಕ ಬಹುಮಾನಗಳನ್ನು ಕೊಡುವುದು—ಇದು ರೂಪಿಸಿಕೊಂಡ ಇನ್ನೂ ಕೆಲವು ಕಾರ್ಯಕ್ರಮಗಳು. ಅನಂತರ ಆಯಾ ಬ್ಯಾಂಕುಗಳ ಕೇಂದ್ರ ಕಛೇರಿಗಳಿಂದ ಈ ಎಲ್ಲ ಕಾರ್ಯಕ್ರಮಗಳು ಸರಿಯಾಗಿ ಆಗುತ್ತವೆಯೋ ಇಲ್ಲವೇ ಎಂದು ಆಗಾಗ್ಗೆ ಪರಿಶೀಲನೆ.

ಆದರೆ ನಾಡಿನ ಭಾಷೆಯಾದ ಕನ್ನಡಕ್ಕೆ ಸರಿಯಾದ ಸ್ಥಾನಮಾನ ಸಿಗುತ್ತಿಲ್ಲ ಎಂಬುದು ತೀರಾ ಶೋಚನೀಯ ಸಂಗತಿ. ಕನ್ನಡ ಕರ್ನಾಟಕದ ಅಧಿಕೃತ ಭಾಷೆ ಎಂದು ಸಾರಿದ್ದರೂ ಇದನ್ನು ಇನ್ನೂ ಅದು ಸರಿಯಾಗಿ ಪಾಲಿಸುತ್ತಿಲ್ಲ. ಸರ್ಕಾರವೇ ಅದನ್ನು ಸರಿಯಾಗಿ ಪಾಲಿಸುತ್ತಿಲ್ಲದಿರುವುದು ವಿಷಾದದ ಸಂಗತಿ.

ನಾವು ಕೇವಲ ಸರ್ಕಾರವನ್ನು ದೂಷಿಸಿದರೆ ಸಾಲದು. ಇಲ್ಲಿ ನಾವು ಇನ್ನೊಂದು ಅಂಶವನ್ನು ಗಮನದಲ್ಲಿಡಬೇಕು. ಹಲವು ರಾಜ್ಯಗಳು ತ್ರಿಭಾಷಾ ಸೂತ್ರವನ್ನು ಒಪ್ಪಿಕೊಂಡಿವೆ. ಈ ಸೂತ್ರದಂತೆ ರಾಜ್ಯದ ಎಲ್ಲ ವ್ಯವಹಾರಗಳು ಸಾರ್ವಜನಿಕ ಸಂಪರ್ಕವಿರುವ ಕಡೆ ಮೂರು ಭಾಷೆಗಳಲ್ಲಿರಬೇಕು ಎಂಬುದು ಈ ಸೂತ್ರ. ಆದರೆ ಕೆಲವು ಬ್ಯಾಂಕುಗಳಲ್ಲಿ ಕೇವಲ ಎರಡು ಭಾಷೆಗಳಲ್ಲೇ ಹಲವು ನಮೂನೆಗಳಿರುವುದನ್ನು ನೋಡಬಹುದು. ಇದು ಸರಿಯಲ್ಲ. ಎಲ್ಲ ನಮೂನೆಗಳು ಕನ್ನಡ, ಇಂಗ್ಲಿಷ್ ಮತ್ತು ಹಿಂದಿಯಲ್ಲಿರತಕ್ಕದ್ದು.

ಭಾರತೀಯ ಸ್ಟೇಟ್ ಬ್ಯಾಂಕಿನ ಕನ್ನಡ ಸಂಘಗಳ ಸಮನ್ವಯ ಸಮಿತಿ ಚೆನ್ನಾಗಿ ಕೆಲಸ ಮಾಡುವುದು ಗೊತ್ತಾಗುತ್ತದೆ. ಭಾರತೀಯ ಸ್ಟೇಟ್ ಬ್ಯಾಂಕಿನ ಎಲ್ಲ ಕನ್ನಡ ಸಂಘಗಳ ಒಕ್ಕೂಟ "ಸಮನ್ವಯ ಸಮಿತಿ" ಎಂದು 1978ರಲ್ಲಿ ಅಸ್ತಿತ್ವಕ್ಕೆ ಬಂತು. ಇದು ಕನ್ನಡವನ್ನು ಯಾವ ರೀತಿ ಬ್ಯಾಂಕಿಂಗ್ ಉದ್ಯಮದಲ್ಲಿ ಹೆಚ್ಚಾಗಿ ಜಾರಿಗೆ ತರಬಹುದು ಎನ್ನುವುದನ್ನು ಯೋಚಿಸಿ ಹಲವಾರು ಕಾರ್ಯಕ್ರಮಗಳನ್ನು ರೂಪಿಸಿತು. ಅದರಂತೆ 1980ರಲ್ಲಿ ಕನ್ನಡದಲ್ಲೇ ಬ್ಯಾಂಕಿಂಗ್ ಪ್ರಪಂಚ ಎಂಬ ಅರ್ಧ ವಾರ್ಷಿಕ ಪತ್ರಿಕೆಯನ್ನು ತಂದಿತು. 1980ರಲ್ಲಿ ಪ್ರಥಮ ಸಂಚಿಕೆ ಪ್ರಕಟವಾಯಿತು. ಅನಂತರ ಸಮನ್ವಯ ಸಮಿತಿಯು 1985ರಲ್ಲಿ ಬ್ಯಾಂಕಿಂಗ್ ಪಾರಿಭಾಷಿಕ ಶಬ್ದಗಳಿಗೆ ಅರ್ಥಗಳನ್ನೂ ಪರ್ಯಾಯ ಪದವನ್ನೂ ವಿವರಣೆಯನ್ನೂ ಕೊಡುವ "ಬ್ಯಾಂಕಿಂಗ್ ನಿಘಂಟು" ಎಂಬುದನ್ನು ಪ್ರಕಟಿಸಿತು.

ಇತ್ತೀಚೆಗೆ ಕನ್ನಡ ಸಂಸ್ಕೃತಿ ನಿರ್ದೇಶನಾಲಯದವರು ಏರ್ಪಡಿಸಿದ ಕಮ್ಮಟದಲ್ಲಿ ಗ್ರಾಮೀಣ ಹಾಗೂ ವಾಣಿಜ್ಯ ಬ್ಯಾಂಕುಗಳು ತಮ್ಮ ನಿತ್ಯ ವ್ಯವಹಾರದಲ್ಲಿ ಬಳಸುವ ನಮೂನೆಗಳನ್ನೂ ಪತ್ರಗಳನ್ನೂ ಕನ್ನಡದಲ್ಲಿ ಪ್ರಕಟಿಸಬೇಕೆಂದು ವಿವಿಧ ಬ್ಯಾಂಕುಗಳ ಪ್ರತಿನಿಧಿಗಳಿಂದ ಕೂಡಿದ ಆರು ದಿನಗಳ ಕಮ್ಮಟವನ್ನು ನಡೆಸಿ ಅವನ್ನು ಪರಿಷ್ಕರಿಸಿ, ಕೈಪಿಡಿ ರೂಪದಲ್ಲಿ ಜುಲೈ 1979ರಲ್ಲಿ "ಬ್ಯಾಂಕಿಂಗ್ ಕೈಪಿಡಿ"ಯನ್ನು ಪ್ರಕಟಿಸಿತು.

ಕನ್ನಡವನ್ನು ವ್ಯಾಪಕವಾಗಿ ಬಳಸಬೇಕಾದರೆ ಬ್ಯಾಂಕಿನ ವ್ಯವಹಾರಗಳು ಕನ್ನಡದಲ್ಲಿದ್ದರೆ ಅದು ಸಾಧ್ಯ. ಇದನ್ನು ಸರ್ಕಾರವೇ ಮಾಡಲು ಸಾಧ್ಯ. ಯಾವ ರೀತಿ ಹಿಂದಿ ಭಾಷೆಗೆ ಉತ್ತೇಜನ ಕೊಡುತ್ತಿರುತ್ತಾರೋ ಅದೇ ರೀತಿ ಕನ್ನಡ ಭಾಷೆಗೂ ಪ್ರೋತ್ಸಾಹ ನೀಡಬೇಕು. ಕನ್ನಡ ಭಾಷೆಯನ್ನು ಬ್ಯಾಂಕುಗಳಲ್ಲಿ ಸರಿಯಾಗಿ ಉಪಯೋಗಿಸುತ್ತಿರುವರೋ ಇಲ್ಲವೋ ಎಂಬುದನ್ನು ಪರಿಶೀಲಿಸಲು ಆಗಾಗ್ಗೆ ಬ್ಯಾಂಕುಗಳ ಪ್ರತಿನಿಧಿಗಳನ್ನು ಸೇರಿಸಿ ಕನ್ನಡ ಎಷ್ಟರಮಟ್ಟಿಗೆ ಪ್ರಯೋಗದಲ್ಲಿದೆ ಎಂಬುದನ್ನು ಸರ್ಕಾರ ತಿಳಿದುಕೊಳ್ಳಬೇಕು.

ಕನ್ನಡೇತರರಿಗೆ ಕನ್ನಡವನ್ನು ಕಲಿಸಲು ಯೋಜನೆಗಳನ್ನು ಹಾಕಿಕೊಳ್ಳಬೇಕು. ಕನ್ನಡ ಕಲಿತು ಪರೀಕ್ಷೆಯಲ್ಲಿ ತೇರ್ಗಡೆಯಾದವರಿಗೆ ಉತ್ತೇಜಕ ಬಹುಮಾನವನ್ನು ಕೊಡಬೇಕು. ಯಾವ ಬ್ಯಾಂಕು ಕನ್ನಡ ಭಾಷೆಯ ಉತ್ತೇಜನಕ್ಕೆ ಹೆಚ್ಚು ಗಮನ ಕೊಡುತ್ತದೆ ಎಂಬುದನ್ನು ತಿಳಿದು ಅದಕ್ಕೆ ಪಾರಿತೋಷಕವನ್ನು ಕೊಡಬೇಕು. ಬರೀ ತ್ರಿಭಾಷಾ ಸೂತ್ರವಿದೆ ಎಂದು ಕುಳಿತರೆ ಸಾಲದು. ಇತ್ತೀಚಿನ ಹಿಂದೀ ಯೋಜನೆಗಳನ್ನು ನೋಡಿದರೆ, ಕನ್ನಡದ ಉಪಯೋಗದ ಬಗ್ಗೆ ನಮ್ಮ ಸರ್ಕಾರ ಅಷ್ಟು ಚಿಂತನೆ ಮಾಡಿದಂತಿಲ್ಲ ಎಂಬ ಅಂಶ ಗಮನಕ್ಕೆ ಬರುತ್ತದೆ. ಈ ದಿಶೆಯಲ್ಲಿ ಪ್ರಾದೇಶಿಕ ಭಾಷೆಯನ್ನು ಹೆಚ್ಚು ಉಪಯೋಗಿಸುವುದು ಅಗತ್ಯ. ಜನತೆಗೆ ಯಾವ ಭಾಷೆ ಅರ್ಥವಾಗುತ್ತದೆಯೋ, ಆ ಭಾಷೆಯಲ್ಲೇ ವ್ಯವಹರಿಸಿದರೆ ಮಾತ್ರ ಕನ್ನಡದ ಏಳಿಗೆ ಸಾಧ್ಯ. ಬ್ಯಾಂಕುಗಳಲ್ಲಿ ಕನ್ನಡದ ಬಳಕೆ ಸಾಧ್ಯ. ಜನಕ್ಕೂ ಅದರಿಂದ ಪ್ರಯೋಜನ. ಇಲ್ಲದಿದ್ದರೆ ಬ್ಯಾಂಕುಗಳಲ್ಲಿ ಕನ್ನಡ ಎಂಬುದು ಬರೀ ಮಾತಾಗಿ ಉಳಿಯುತ್ತದೆ. ●



## ಭಾಷೆ—ಸಮಾಜ

ಸರ್ವಸಾಮಾನ್ಯ ಭಾಷೆಯೊಂದನ್ನು ಒಂದು ಜನಸಮುದಾಯದ ಸಮಷ್ಟಿ ಹಿತಗಳ ಅಭಿವ್ಯಕ್ತಿಯೆಂದು ಪರಿಗಣಿಸಬಹುದು. ಆದರೆ ಈ ಮಾತನ್ನು ತಿರುಗ ಮುರುಗ ಮಾಡಿ, ಸರ್ವಸಾಮಾನ್ಯ ಭಾಷೆಯನ್ನು ಹೊಂದುವುದರಿಂದ ಜನಸಾಮಾನ್ಯವೊಂದರ ಸಮಗ್ರ ಹಿತಸಾಧನೆಯಾಗಿಯೇ ತೀರುವುದೆಂದಾಗಿ ಭಾವಿಸಲಾಗಿದೆ. ಸಮಾಜದಲ್ಲಿ ಭಾಷೆಯ ಪಾತ್ರವನ್ನು ಕುರಿತ ತಪ್ಪು ಕಲ್ಪನೆಗಳಲ್ಲಿ ಹಲವಕ್ಕೆ ಈ ತಪ್ಪು ಭಾವನೆಯೇ ಕಾರಣ.

**ಆರ್. ಬಿ. ಲ ಪಾಜ್**

('ರಾಷ್ಟ್ರಭಾಷಾ ಪ್ರಶ್ನೆ' ಎಂಬ ಪುಸ್ತಕದಲ್ಲಿ)



● ● ●

## 'ಬ್ಯಾಂಕಿಂಗ್ ಪ್ರಪಂಚ'ಕ್ಕೆ ಆಜೀವ ಚಂದಾದಾರರಾಗಿ

● ● ●

# ಗೃಹನಿರ್ಮಾಣ ಸಾಲ ಹಾಗೂ ವಾಣಿಜ್ಯ ಬ್ಯಾಂಕುಗಳು

**ಭಾರತದಲ್ಲಿ ವಸತಿಹೀನರ ಸಮಸ್ಯೆ ಬೃಹತ್ತಾದ್ದು. ಎಲ್ಲರಿಗೂ ಅನ್ನ ಬಟ್ಟೆಗಳ ಜೊತೆಗೆ ವಸತಿಯೂ ದೊರಕುವಂತೆ ಮಾಡುವ ಕಾರ್ಯದಲ್ಲಿ ಬ್ಯಾಂಕುಗಳು ವಹಿಸುವ ಪಾತ್ರದ ವಿವೇಚನೆ ಇಲ್ಲಿದೆ.**

**ಸಿ. ಕೆ. ರಂಗಾಚಾರಿ**
ಮೈಸೂರು ಬ್ಯಾಂಕ್, ಪ್ರಾದೇಶಿಕ ಕಛೇರಿ-2
ಮೈಸೂರು ವಲಯ, ಕುವೆಂಪುನಗರ
ಮೈಸೂರು–570 023

ನಮ್ಮ ದೇಶದಲ್ಲಿ 24 ಕೋಟಿಯಷ್ಟು ಜನ ವಸತಿಗೃಹಗಳ ಕೊರತೆಯನ್ನೆದುರಿಸುತ್ತಿದ್ದಾರೆ. ಇವರ ಪೈಕಿ ನಗರ ಪ್ರದೇಶಗಳಲ್ಲಿರುವವರು 6 ಕೋಟಿ, ಗ್ರಾಮೀಣ ಪ್ರದೇಶಗಳಲ್ಲಿ 18 ಕೋಟಿ.

ಈ ಕೊರತೆಯನ್ನು ನೀಗಿಸುವ ದೃಷ್ಟಿಯಿಂದ ಏಳನೆಯ ಪಂಚವಾರ್ಷಿಕ ಯೋಜನೆಯಲ್ಲಿ ವಸತಿ ಸೌಲಭ್ಯದ ಬಗ್ಗೆ ಕೇವಲ ಆರ್ಥಿಕ ವ್ಯಯವನ್ನು ಗುರುತಿಸುವುದಷ್ಟೇ ಅಲ್ಲದೆ, ಈ ಉದ್ದೇಶದ ಪೂರೈಕೆಗೆ ಅವಶ್ಯಕವಾದ ಕಾರ್ಯಕ್ಕೆ ಕೂಡ ಹೆಚ್ಚಿನ ಪ್ರಾಧಾನ್ಯ ನೀಡಲಾಯಿತು.

ಕನಿಷ್ಠ ಆಗತ್ಯಗಳ ಯೋಜನೆಯ (ಮಿನಿಮಮ್ ನೀಡ್ಸ್ ಪ್ರೋಗ್ರಾಮ್) ಅಡಿಯಲ್ಲಿ ಆರ್ಥಿಕವಾಗಿ ಹಿಂದುಳಿದ ವರ್ಗಗಳನ್ನು ಬಡತನದ ರೇಖೆಯ ಮೇಲೆತ್ತುವ ದಿಶೆಯಲ್ಲಿ ಬಹಳಷ್ಟು ಕಾರ್ಯಕ್ರಮಗಳನ್ನು ರೂಪಿಸಲಾಗಿದೆ. ಅವುಗಳಲ್ಲಿ "ಗೃಹ ಯೋಜನೆ"ಯೂ ಒಂದು.

ಗೃಹನಿರ್ಮಾಣದ ಈ ಮಹತ್ಕಾರ್ಯವನ್ನು, ಮುನ್ನಡೆವ ಯೋಜನೆಯಾಗಿ ಕಾರ್ಯಾಚರಣೆಯಲ್ಲಿ ತೊಡಗಿಸಬೇಕಾದರೆ, ಸಾಕಷ್ಟು ನಿಧಿಗಳು ಅತ್ಯಾವಶ್ಯಕವಾಗಿರುತ್ತವೆ.

ಈ ದೃಷ್ಟಿಯಿಂದ ಭಾರತೀಯ ರಿಸರ್ವ್ ಬ್ಯಾಂಕು ಗೃಹನಿರ್ಮಾಣ ಸಾಲದ ಯೋಜನೆಯನ್ನು ಪ್ರಜೆಗಳ ಕೈಸೇರಿಸುವ ನಿಲುವನ್ನು ತಳೆದು ಈ ಹೊಣೆಯನ್ನು ವಾಣಿಜ್ಯ ಬ್ಯಾಂಕುಗಳಿಗೆ ವಹಿಸಿ ಕೊಟ್ಟಿದೆ.

ವಿವಿಧ ವರ್ಗಗಳಿಗೆ ಸೇರಿದ ಜನರಿಗೆ ತಮ್ಮದೇ ಆದ ಗೃಹವನ್ನು ನಿರ್ಮಿಸುವ ಸಲುವಾಗಿ ಹಾಗೂ ಕೊಳಗೇರಿಗಳಲ್ಲಿ ವಾಸಿಸುತ್ತಿರುವ ಬಡಕುಟುಂಬಗಳ ಪರಿಸ್ಥಿತಿಗಳನ್ನು ಉತ್ತಮಗೊಳಿಸಲು ಅತ್ಯಂತ ಕಡಿಮೆ ಬಡ್ಡಿದರದಲ್ಲಿ ಸಾಲ ನೀಡಿ ಅವರ ಗೃಹನಿರ್ಮಾಣದ ಕನಸನ್ನು ನನಸಾಗಿ ಮಾಡುವ ಉದ್ದೇಶದಿಂದ ಗೃಹನಿರ್ಮಾಣ ಸಾಲ ಯೋಜನೆಯನ್ನು ರೂಪಿಸಲಾಗಿದೆ.

ನಗರ ಹಾಗೂ ಗ್ರಾಮೀಣ ಪ್ರದೇಶಗಳವರು ಇದರ ಫಲಾನುಭವಿಗಳಾಗಬಹುದು. ಆದ್ಯತಾ ವಲಯದ ಅಡಿಯಲ್ಲಿ ಬರುವ ಫಲಾನುಭವಿಗಳೂ ಈ ಸಾಲ ಪಡೆಯಲು ಅರ್ಹರಾಗಿರುತ್ತಾರೆ.

ಹುಡ್ಕೋ, ನಗರಾಭಿವೃದ್ಧಿ ಪ್ರಾಧಿಕಾರಗಳು ಹಾಗೂ ಅನ್ಯ ಅಧಿಕರಣಗಳ ಮೂಲಕ ನಿರ್ಮಾಣ ಕಾರ್ಯವನ್ನು ನಿರ್ವಹಿಸುತ್ತಿರುವ ಕೇಂದ್ರ ಹಾಗೂ ರಾಜ್ಯಸರ್ಕಾರಗಳ ಖಜಾನೆಗಳನ್ನು ಪರೋಕ್ಷವಾಗಿ ಬಲಗೊಳಿಸುವ ಉದ್ದೇಶದಿಂದ ಕೂಡ ಯೋಜನೆಯನ್ನು ನಿರ್ಮಿಸಲಾಗಿದೆ.

'ಆರ್.ಸಿ.ಷಾ' ಅವರ ನೇತೃತ್ವದ ಕಾರ್ಯತಂಡ 1978ರಲ್ಲಿ ಸಲ್ಲಿಸಿದ ಸಲಹೆಗಳ ಮೇರೆಗೆ 1979 ರಲ್ಲಿ ಭಾರತೀಯ ರಿಸರ್ವ್ ಬ್ಯಾಂಕ್, ಬ್ಯಾಂಕುಗಳ ವರ್ಧಿತ ಮುಂಗಡದ ಒಂದು ನಿರ್ದಿಷ್ಟ ಶೇಕಡದ ಮೊಬಲಗನ್ನು ಗೃಹನಿರ್ಮಾಣ ಸಾಲ ಯೋಜನೆಗೆ ನಿಗದಿಸುತ್ತಾ ಬಂದಿದೆ. ಗೃಹನಿರ್ಮಾಣವನ್ನು ಸಾಲಕ್ಕೆ ಸಂಬಂಧಿಸಿದಂತೆ ಆದ್ಯತಾವಲಯವೆಂದು ಪರಿಗಣಿಸಿ, ಉತ್ತಮ ಮಟ್ಟದ ಸೌಲಭ್ಯಗಳನ್ನು ನೀಡಿ ಪ್ರೋತ್ಸಾಹಿಸಬೇಕೆಂಬುದು ಈ ಸಲಹೆಗಳಲ್ಲಿ ಒಂದಾಗಿದೆ.

ಇಪ್ಪತ್ತು ಅಂಶಗಳ ಕಾರ್ಯಕ್ರಮದ ಅಡಿಯಲ್ಲಿ ಪರಿಶಿಷ್ಟ ಜಾತಿ–ಪರಿಶಿಷ್ಟ ವರ್ಗ ಮತ್ತು ಸಮಾಜದ ಇತರ ದುರ್ಬಲ ವರ್ಗಗಳಿಗೆ, ರೂ. 5000ದ ವರೆಗೆ, ನೇರವಾಗಿ ಸಾಲ ನೀಡಬೇಕೆಂಬುದು ಕಡ್ಡಾಯವಾಗಿದೆ.

ಈ ಹಿನ್ನೆಲೆಯಲ್ಲಿ ಈಗ ನಮ್ಮ ವಾಣಿಜ್ಯ ಬ್ಯಾಂಕುಗಳ ಪಾತ್ರವನ್ನು ಅವಲೋಕಿಸಬಹುದು. ಈ ಮುಂದಿನ ನಿರ್ದಿಷ್ಟ ಉದ್ದೇಶಗಳಿಗೆ ಗೃಹನಿರ್ಮಾಣ ಸಾಲವನ್ನು ಬ್ಯಾಂಕುಗಳು ನೀಡಬಹುದಾಗಿದೆ :

| | |
|---|---|
| 1 ಪರಿಶಿಷ್ಟ ವರ್ಗ–ಜಾತೀಯ ಜನಾಂಗಕ್ಕೆ : | ಗೃಹನಿರ್ಮಾಣಕ್ಕೆ ಹಾಗೂ ವಿದ್ಯಾರ್ಥಿನಿಲಯಗಳ ನಿರ್ಮಾಣಕ್ಕೆ |
| 2 ಕೊಳಗೇರಿಗಳ ನಿವಾಸಿಗಳಿಗೆ (ಸರಕಾರದ ಜಾಮೀನಿನ ಮೇಲೆ ಅಥವಾ ಪರೋಕ್ಷವಾಗಿ ಸರ್ಕಾರದ ಮೂಲಕ) | ಕೊಳಗೇರಿಗಳ ನಿರ್ಮೂಲನಾ ಕಾರ್ಯಕ್ರಮದಡಿಯಲ್ಲಿಯ ಗೃಹನಿರ್ಮಾಣಕ್ಕಾಗಿ |
| 3 ಬ್ಯಾಂಕುಗಳ ಸೇವಾವಲಯಗಳಲ್ಲಿ ಬರುವ ಪ್ರದೇಶಗಳಲ್ಲಿ ಸರ್ಕಾರ ಕೈಗೊಂಡ ಯೋಜನೆಗಳಿಗೆ : | ಕುಟುಂಬ ಕಲ್ಯಾಣ ಕೇಂದ್ರಗಳು, ಹಾಗೂ ಆಸ್ಪತ್ರೆ (ಆರೋಗ್ಯ ಕೇಂದ್ರಗಳು) ನಿರ್ಮಾಣಕ್ಕಾಗಿ |
| 4 ಗ್ರಾಮ–ನಗರಗಳ ಮಧ್ಯಮ ಆದಾಯ ವರ್ಗ ಹಾಗೂ ಅಲ್ಪ ಆದಾಯವರ್ಗಗಳು | ವಿವಿಧ ಗೃಹನಿರ್ಮಾಣ ಯೋಜನೆಗಳಿಗೆ |

ಹಾಗೂ, ವಿದ್ಯಾಲಯಗಳು, ಸಮಾಜ ಕಲ್ಯಾಣ ಕೇಂದ್ರಗಳು ಹಾಗೂ ಕ್ರೀಡಾ ಮತ್ತು ಮನರಂಜನಾ ಸಂಸ್ಥೆಗಳ ಕಟ್ಟಡಗಳು ಮುಂತಾದ ಅಭಿವೃದ್ಧಿ ಕಾರ್ಯಗಳ ಕಟ್ಟಡಗಳ ನಿರ್ಮಾಣಗಳಿಗೆ ಮತ್ತು

ನಗರ ಹಾಗೂ ಗ್ರಾಮೀಣವಾಸಿಗಳ ದಿನನಿತ್ಯ ಬಳಕೆಗೆ ಬೇಕಾಗುವ ಪದಾರ್ಥಗಳ ಮಾರಾಟ ಸ್ಥಳಗಳಾದಂತಹ ಮಾರುಕಟ್ಟೆಗಳು, ಅಂಗಡಿ ಮಳಿಗೆಗಳು ಮುಂತಾದವುಗಳಿಗೆ.

ಇಷ್ಟೇ ಅಲ್ಲದೆ ಮನೆ ಇರುವವರು, ತಮ್ಮ ಪ್ರಸ್ತುತ ಮನೆಗಳ ದುರಸ್ತಿ ಕಾರ್ಯಗಳಿಗೂ ಈ ಯೋಜನೆಯ ಸಾಲವನ್ನು ವಿನಿಯೋಗಿಸಿಕೊಳ್ಳಬಹುದು.

ವ್ಯಕ್ತಿಗಳು, ಸಹಕಾರ ಸಂಘಗಳು ಗೃಹನಿರ್ಮಾಣ ಸಂಸ್ಥೆಗಳು, ಗೃಹಮಂಡಳಿಗಳು ಮತ್ತು ಗೃಹನಿರ್ಮಾಣದಲ್ಲಿ ತೊಡಗಿದ ಇತರ ಸಂಸ್ಥೆಗಳು ಈ ಯೋಜನೆಯ ಫಲಾನುಭವಿಗಳಾಗಬಹುದು.

ವ್ಯಕ್ತಿಗತ ಫಲಾನುಭವಿಗಳನ್ನು ಈ ಸಾಲದ ಯೋಜನೆಯಲ್ಲಿ 4 ವರ್ಗಗಳಾಗಿ ವಿಂಗಡಿಸಲಾಗಿದೆ:

| | | |
|---|---|---|
| 1 ಆರ್ಥಿಕವಾಗಿ ಹಿಂದುಳಿದ ವರ್ಗ | — | ಮಾಸಿಕ ವರಮಾನ ರೂ. 700 ವರೆಗೆ |
| 2 ಅಲ್ಪ ವರಮಾನ ವರ್ಗ | — | ಮಾಸಿಕ ವರಮಾನ ರೂ. 701ರಿಂದ ರೂ. 1500 |
| 3 ಮಧ್ಯಮ ವರಮಾನ ವರ್ಗ | — | ಮಾಸಿಕ ವರಮಾನ ರೂ. 1501 ರಿಂದ ರೂ. 2500 |
| 4 ಹೆಚ್ಚಿನ ವರಮಾನ ವರ್ಗ | — | ಮಾಸಿಕ ವರಮಾನ ರೂ. 2500ಗಿಂತ ಅಧಿಕ |

**ಸಾಲದ ಮೊತ್ತ :** ಇದನ್ನು ನಿರ್ಣಯಿಸಲು ಈ ಮುಂದಿನ ಕೆಲವು ನೈಜ ಅಂಶಗಳನ್ನು ಪರಿಗಣನೆಗೆ ತೆಗೆದುಕೊಳ್ಳತಕ್ಕದ್ದು :

1 ಪ್ರಸ್ತುತ ಕಟ್ಟಡ ವೆಚ್ಚ
2 ನಿರ್ಮಾಣಕಾರ್ಯದಲ್ಲಿ, ಭೂಮಿ, ಕಟ್ಟಡ ಸಾಮಗ್ರಿ ಮುಂತಾದವುಗಳ ಮಿತವಾದ ಬಳಕೆ
3 ಕಟ್ಟಡದ ನಿರ್ಮಿತ ವಿಸ್ತೀರ್ಣದ ಅಂಶ.

ಸಾಧಾರಣವಾಗಿ : ಯಾವುದೇ ವರ್ಗದ ಒಬ್ಬ ಫಲಾನುಭವಿಗೆ ರೂ. 1 ಲಕ್ಷಕ್ಕೆ ಮೀರದಂತೆ ಸಾಲ ನೀಡಬಹುದು. ಆದರೆ ಅರ್ಹ ಫಲಾನುಭವಿಗಳಿಗೆ ನಿರ್ಮಾಣಕಾರ್ಯಕ್ಕನುಸಾರವಾಗಿ, ರೂ. 3 ಲಕ್ಷದ ವರೆಗೆ ನೀಡಬಹುದು.

**ಬಡ್ಡಿ ದರ ಹಾಗೂ ಸ್ವಭಾಗದ (ಮಾರ್ಜಿನ್) ಹಣ**

| ಮೊತ್ತ | ಸ್ವಭಾಗದ ಹಣ (ಮಾರ್ಜಿನ್) | ಬಡ್ಡಿ ದರ |
|---|---|---|
| | ಶೇ. | ಶೇ. |
| ರೂ. 5,000ದ ವರೆಗೆ (ಪರಿಶಿಷ್ಟ ವರ್ಗ ಹಾಗೂ ಜಾತಿಯವರಿಗೆ) | 20 | 4.0 |
| ರೂ. 5,000ದಿಂದ ರೂ. 20,000ದ ವರೆಗೆ (ಎಲ್ಲ ವರ್ಗಗಳಿಗೂ) | ,, | 12.5 |
| ರೂ. 20,000ದಿಂದ ರೂ. 50.000 ವರೆಗೆ | 25 | 13.5 |
| ರೂ. 50.001ರಿಂದ ರೂ. 1ಲಕ್ಷದ ವರೆಗೆ | 30 | 14.5 |
| ರೂ. 1ಲಕ್ಷಕ್ಕಿಂತ ಅಧಿಕ ರೂ. 3 ಲಕ್ಷಗಳವರೆಗೆ | 35 | 16.0 |

**ಮುಂಗಡದ ಬಟವಾಡೆ :** ನಿರ್ಮಾಣ ಕಾರ್ಯದ ವಿವಿಧ ಹಂತಗಳಿಗನುಗುಣವಾಗಿ 4 ಅಥವಾ 5 ಕಂತುಗಳಲ್ಲಿ

**ಪೂರಕ ಆಧಾರ :** ಹಕ್ಕು ಪತ್ರಗಳ ಸ್ವಾಧೀನತೆಯ ಮೂಲಕ ಆಸ್ತಿಯ ಅಡಮಾನವನ್ನು ಆಧಾರವಾಗಿ ಪಡೆಯಬೇಕು. ಇವನ್ನು ಪಡೆಯುವುದರಲ್ಲಿ ಅಂತರಾಯವಿರುವಲ್ಲಿ, ಜೀವನ ವಿಮಾ ಪತ್ರಗಳು, ಸರ್ಕಾರಿ ವಚನಪತ್ರ, ಸರಿ ಪ್ರಾಮಿಸ್ ಷೇರು, ಡಿಬೆಂಚರ್ ಅಥವಾ ಚಿನ್ನ ಮುಂತಾದ ಬೆಲೆಬಾಳುವಂತಹವುಗಳ ಒತ್ತೆಗಳನ್ನು ಪಡೆಯಬಹುದು.

**ಮರುಪಾವತಿ :** ಸಾಧಾರಣವಾಗಿ 15 ವರ್ಷಗಳಲ್ಲಿ ಇದರ ಮರುಪಾವತಿಯಾಗುವಂತೆ ಇದನ್ನು ಮಾಸಿಕ ಕಂತುಗಳಲ್ಲಿ ವಿಭಜಿಸಿ ಪಡೆಯಬೇಕು. ಕಾಲಕಾಲಕ್ಕೆ ನಿಗದಿತ ದರದಲ್ಲಿ ಫಲಾನುಭವಿಗಳಿಂದ ಬಡ್ಡಿಯನ್ನು ಪಡೆಯಬೇಕು. ಕಂತುಗಳನ್ನು ನಿರ್ಣಯಿಸುವಾಗ ವಸೂಲಾತಿಯು ಫಲಾನುಭವಿಯ ಒಟ್ಟು ಮಾಸಿಕ ಆದಾಯದ ಶೇ. 35ಕ್ಕಿಂತ ಅಧಿಕವಾಗದಂತೆ ನೋಡಿಕೊಳ್ಳತಕ್ಕದ್ದು.

ಪ್ರತಿವರ್ಷ ಪ್ರತಿ ಬ್ಯಾಂಕಿನ ಒಟ್ಟು ಮುಂಗಡದ ಮೊತ್ತದಲ್ಲಿ ಶೇ. 0.5ರಷ್ಟು ಭಾಗವನ್ನು ಗೃಹ ನಿರ್ಮಾಣ ಸಾಲಕ್ಕಾಗಿ ನಿಗದಿಗೊಳಿಸಲಾಗುತ್ತದೆ. ಈ ಅಂಶದ ಹೆಚ್ಚಿನ ಭಾಗವನ್ನು ವಿವಿಧ ವರ್ಗಗಳ ವ್ಯಕ್ತಿಗಳಿಗೆ ನೇರವಾಗಿ ನೀಡಲು ಹಾಗೂ ಹುಡ್ಕೊ ಮತ್ತು ಇತರ ಗೃಹನಿರ್ಮಾಣ ಸಂಸ್ಥೆಗಳ ಷೇರುಗಳು ಹಾಗೂ ಡಿಬೆಂಚರ್‌ಗಳನ್ನು ಪಡೆಯುವ ಉದ್ದೇಶಕ್ಕಾಗಿ ನೀಡಬಹುದು.

ಉಳಿದ ಭಾಗವನ್ನೂ ಗೃಹ ಅಭಿವೃದ್ಧಿ ಹಣಕಾಸು ನಿಗಮಕ್ಕೆ ನೇರವಾದ ಸಾಲಕ್ಕಾಗಿ ನಿಗದಿಗೊಳಿಸಿರುತ್ತದೆ. ಈ ರೀತಿಯ ಸಾಲ ಸಹ ಪರೋಕ್ಷವಾಗಿ ವೈಯಕ್ತಿಕ ಗೃಹನಿರ್ಮಾಣ ಕಾರ್ಯವನ್ನು ಪ್ರೋತ್ಸಾಹಿಸುತ್ತದೆ.

ಈ ಯೋಜನೆಯ ಸರಿಯಾದ ವಿನಿಯೋಗದಿಂದ ಹಾಗೂ ಇದನ್ನು ಸಮರ್ಪಕವಾಗಿ ತೊಡಗಿಸುವುದರಿಂದ, ಸಮಾಜದ ವಿವಿಧ ವರ್ಗಗಳ ಜನತೆಯ ಆರ್ಥಿಕ ಪರಿಸ್ಥಿತಿಗಳು ಸುಧಾರಿಸುವುದರಲ್ಲಿ ಸಂದೇಹವಿಲ್ಲ. ●

# ಸರ್ಕಾರಿ ವಲಯದ ಬ್ಯಾಂಕುಗಳ ಪ್ರಗತಿ:

## ಒಂದು ಅವಲೋಕನ

**ಏಕರೀತಿಯ ಬಡ್ಡಿದರ, ಸಿಬ್ಬಂದಿ ವೇತನ, ಸೇವಾನಿಯಮ, ಶಾಖಾ ವಿಸ್ತರಣೆ ನೀತಿ ಹೊಂದಿರುವ ಬ್ಯಾಂಕುಗಳ ಪ್ರಗತಿ ಏಕರೂಪದ್ದಾಗಿಲ್ಲ. ಅವುಗಳ ನಡುವೆ ಹಾವು ಏಣಿ ಆಟ ನಡೆದಿದೆ. ಒಂದು ವಿಶ್ಲೇಷಣೆ.**

**ಸಿ. ಎಸ್. ಪುಟ್ಟೋರಾವ್**
ಸ್ಟೇಟ್ ಬ್ಯಾಂಕ್ ಆಫ್ ಮೈಸೂರು
ಬೆಂಗಳೂರು

1969ರ ಜುಲೈ 19ರಂದು ಕೇವಲ ರೂ. 4,646, ಕೋಟಿ ಠೇವಣಿ ಹೊಂದಿದ್ದ ಸರ್ಕಾರಿ ವಲಯದ ಬ್ಯಾಂಕುಗಳು 31 ಮಾರ್ಚ್ 1989ರ ವೇಳೆಗೆ ರೂ. 1,43,924 ಕೋಟಿಯಷ್ಟು ಠೇವಣಿ ಹೊಂದಿದ್ದುವು. ಇದೇ ಅವಧಿಯಲ್ಲಿ ಬ್ಯಾಂಕ್ ಶಾಖೆಗಳ ಸಂಖ್ಯೆ 8,045ರಿಂದ 53,287ಕ್ಕೆ ಏರಿತು. 1986ರಲ್ಲಿದ್ದಂತೆ ಠೇವಣಿಯಲ್ಲಿ 30.98 ರಷ್ಟು ಮತ್ತು ಶಾಖೆಗಳ ಬೆಳವಣಿಗೆಯಲ್ಲಿ 6.7 ರಷ್ಟು ಬೆಳವಣಿಗೆಯಾಗಿದೆ. ಯಾವುದೇ ಅಳತೆಗೋಲಿನಿಂದ ನೋಡಿದರೂ ಇದು ಮೆಚ್ಚಲೇಬೇಕಾದ ಪ್ರಗತಿ. ಇಂದು ಸರ್ಕಾರಿ ವಲಯದ 11 ಬ್ಯಾಂಕುಗಳು 1969ರ ಒಟ್ಟು ಠೇವಣಿಗಿಂತ ಹೆಚ್ಚು ಠೇವಣಿ ಪಡೆದಿವೆ. ಭಾರತೀಯ ಸ್ಟೇಟ್ ಬ್ಯಾಂಕ್ ಒಂದೇ ಆಗಿನ ಎಲ್ಲ ಬ್ಯಾಂಕುಗಳ ಒಟ್ಟು ಠೇವಣಿಗಳಿಗಿಂತ 8ರಷ್ಟು ಹೆಚ್ಚು ಠೇವಣಿ ಹೊಂದಿದೆ.

ಭಾರತೀಯ ಸ್ಟೇಟ್ ಬ್ಯಾಂಕ್ ಮತ್ತು ಅದರ

7 ಬ್ಯಾಂಕುಗಳು. 1969ರಲ್ಲಿ ರಾಷ್ಟ್ರೀಕರಣವಾದ 14 ಬ್ಯಾಂಕುಗಳು ಮತ್ತು 1980ರಲ್ಲಿ ರಾಷ್ಟ್ರೀಕರಣವಾದ 6 ಬ್ಯಾಂಕುಗಳು—ಹೀಗೆ ಒಟ್ಟು 28 ಬ್ಯಾಂಕುಗಳು ಸರಕಾರಿ ವಲಯದ ಬ್ಯಾಂಕುಗಳು. ಇವು ರಾಷ್ಟ್ರದ ವಾಣಿಜ್ಯ ಬ್ಯಾಂಕುಗಳ ವ್ಯವಹಾರಗಳ ಹೆಚ್ಚಿನ ಪಾಲನ್ನು ಹೊಂದಿ ದೇಶದ ಹಣಕಾಸು ವ್ಯವಹಾರಗಳ ಮೇಲೆ ಗಮನಾರ್ಹ ಪರಿಣಾಮ ಬೀರುತ್ತವೆ. ಈ ಬ್ಯಾಂಕುಗಳ ಆಶ್ರಯದಲ್ಲಿ ಈಗ 196 ಗ್ರಾಮೀಣ ಬ್ಯಾಂಕುಗಳು ಕಾರ್ಯ ನಿರ್ವಹಿಸುತ್ತಿವೆ. ಇದಲ್ಲದೆ ರಾಷ್ಟ್ರದಲ್ಲಿ 134 ವಿದೇಶಿ ಬ್ಯಾಂಕ್ ಶಾಖೆಗಳು ರೂ. 3.773 ಕೋಟಿ ಠೇವಣಿಯನ್ನೂ, ಖಾಸಗಿ ಒಡೆತನದ 80 ಅನುಸೂಚಿತ ಬ್ಯಾಂಕುಗಳ 4,152 ಶಾಖೆಗಳು ಮತ್ತು ರೂ. 5,360 ಕೋಟಿ ಠೇವಣಿಯನ್ನೂ (1986) ಹೊಂದಿದ್ದು ಇವೂ ಗಮನಾರ್ಹ ರೀತಿಯಲ್ಲಿ ಸೇವೆ ಸಲ್ಲಿಸುತ್ತಿವೆ. ಒಂದು ಕಡೆ 28 ಸರಕಾರಿ ವಲಯ ಬ್ಯಾಂಕುಗಳಲ್ಲಿ ಪ್ರತಿಯೊಂದಕ್ಕೂ ತನ್ನದೇ ಆದ ಅಸ್ತಿತ್ವ. ಇವೂ ವಿದೇಶಿ ಬ್ಯಾಂಕುಗಳೂ ಖಾಸಗಿ ಒಡೆತನದ ಬ್ಯಾಂಕುಗಳೂ ಪರಸ್ಪರ ಸ್ಪರ್ಧೆ ನಡೆಸುತ್ತ, ಎಲ್ಲವೂ ಒಂದೇ ಗುರಿಯತ್ತ ಮುಂದೆ ಸಾಗುತ್ತಿವೆ.

## ಸ್ಥಾನಪಲ್ಲಟ

ಮೇಲೆ ಉಲ್ಲೇಖಿಸಿದ ಈ 28 ಬ್ಯಾಂಕುಗಳ ಪ್ರಗತಿ ಒಂದೇ ಪ್ರಕಾರವಾಗಿಲ್ಲ. 1960. 1969. 1980, 1984, 1989 ಈ ವರ್ಷಗಳಲ್ಲಿ ಬ್ಯಾಂಕುಗಳ ಪ್ರಗತಿಯನ್ನು ಪರಿವೀಕ್ಷಿಸಿದಾಗ ಅನೇಕ ಏರಿಳಿತಗಳು ಕಂಡುಬರುತ್ತವೆ. ಕೆಲವು ಬ್ಯಾಂಕುಗಳು ತಾವು ಇದ್ದ ದರ್ಜೆಯಿಂದ ಮೇಲೆ ಏರಿದ್ದರೆ ಕೆಲವು ಕೆಳಗೆ ಇಳಿದಿವೆ. ವಿಜಯಾ ಬ್ಯಾಂಕು ತಾನಿದ್ದ 28ನೆಯ ಸ್ಥಾನದಿಂದ ಹತ್ತು ಮೆಟ್ಟಿಲು ಏರಿ 18ನೆಯ ಸ್ಥಾನವನ್ನು ತಲುಪಿ ಅತ್ಯಂತ ಹೆಚ್ಚು ಮೆಟ್ಟಿಲುಗಳನ್ನು ಏರಿದ ದಾಖಲೆಗೆ ಅರ್ಹವಾದರೆ, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು 10 ಮೆಟ್ಟಿಲು ಕೆಳಗಿಳಿದು, ತಾನಿದ್ದ 16ನೆಯ ಸ್ಥಾನದಿಂದ 26ನೆಯ ಸ್ಥಾನಕ್ಕೆ ಇಳಿದಿದೆ. ಸ್ಟೇಟ್ ಬ್ಯಾಂಕ್ ಆಫ್ ಬಿಕನೀರ್ ಮತ್ತು ಜೈಪುರ ಬ್ಯಾಂಕು ತಾನಿದ್ದ 15ನೇ ಸ್ಥಾನದಿಂದ 7ನೇ ಸ್ಥಾನಕ್ಕೆ ಏರಿ ಮತ್ತೆ 21ನೇ ಸ್ಥಾನಕ್ಕೆ ಇಳಿದು 18ನೆಯ ಸ್ಥಾನಕ್ಕೆ ಏರಿ ಮತ್ತೆ 22ನೇ ಸ್ಥಾನ ಉಳಿಸಿಕೊಳ್ಳಲು ಹೋರಾಡಿದೆ. ಈ ರೀತಿ ಹಾವು ಏಣಿ ಆಟ ನಡೆದಿದೆ. ಎಲ್ಲ ಬ್ಯಾಂಕುಗಳಿಗೂ ಏಕರೀತಿಯವಾದ ಠೇವಣಿ ಮೇಲಿನ ಬಡ್ಡಿ, ಉದರಿ ಮೇಲಿನ ಬಡ್ಡಿ, ಸಿಬ್ಬಂದಿ ವೇತನ ಮತ್ತು ಸೇವಾ ನಿಯಮಗಳು, ಶಾಖಾ ವಿಸ್ತರಣೆ ನೀತಿ ಇದ್ದು, ಅನುಶಾಸನದ ಪ್ರಕಾರ ಇವುಗಳ ಪ್ರಗತಿಯೂ ಏಕಪ್ರಕಾರವಾಗಿರಬೇಕಾಗಿತ್ತು. ಪರಿಸ್ಥಿತಿ ಹಾಗಿಲ್ಲ. ಭಿನ್ನವಾಗಿದೆ. ಭಾರತೀಯ ಸ್ಟೇಟ್ ಬ್ಯಾಂಕ್ ಎಲ್ಲ ರೀತಿಯಲ್ಲೂ ಬ್ಯಾಂಕುಗಳಲ್ಲೆಲ್ಲ ಅಗ್ರಶ್ರೇಣಿಯಲ್ಲಿ ಇದ್ದು ಏಕಮೇವಾದ್ವಿತೀಯವಾಗಿದೆ. ಇದು 7,979 ಶಾಖೆ ಹೊಂದಿದ್ದು ರೂ. 37,334 ಕೋಟಿ ಠೇವಣಿಯ ವಿಕ್ರಮ ಸಾಧಿಸಿದೆ. ಇದು ತನ್ನ ಹತ್ತಿರದ ಪೈಪೋಟಿದಾರ ಬ್ಯಾಂಕಾದ ಬ್ಯಾಂಕ್ ಆಫ್ ಇಂಡಿಯಾಗಿಂತ ರೂ. 24,298 ಕೋಟಿ ಹೆಚ್ಚು ಠೇವಣಿ ಹೊಂದಿದೆ. ಈ ಬ್ಯಾಂಕಿನ ಜೊತೆಗೆ ಬೇರೆ ಯಾವ ಬ್ಯಾಂಕೂ ಮಾಡಲು ಸ್ಥಾನಕ್ಕಾಗಿ ಪೈಪೋಟಿ ನಡೆಸುವ ಪರಿಸ್ಥಿತಿಯಿಲ್ಲ. ಇದರ 7 ಸಹಬ್ಯಾಂಕುಗಳು 3,961 ಶಾಖೆ ಮತ್ತು ರೂ. 11,080 ಕೋಟಿ ಠೇವಣಿ ಹೊಂದಿವೆ. ಇವನ್ನೂ ಸೇರಿಸಿದರೆ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಇನ್ನೂ ದೊಡ್ಡದೆನಿಸಿಕೊಳ್ಳುತ್ತದೆ. ಶಾಖೆಗಳ ಸಂಖ್ಯೆಯಿಂದ ಇದು ಪ್ರಪಂಚದಲ್ಲೇ ಅತ್ಯಂತ ದೊಡ್ಡ ಬ್ಯಾಂಕ್.

28 ಬ್ಯಾಂಕುಗಳ ಪ್ರಗತಿಯನ್ನು ವಿಂಗಡಿಸಿದಾಗ ನಾಲ್ಕು ಪ್ರಕಾರಗಳು ಕಂಡುಬರುತ್ತವೆ. ಮೂರು ಬ್ಯಾಂಕುಗಳು ಹಿಂದೆ ನೋಡದೆ ಒಂದೇ ಸಮನೆ ಮೇಲೆ ಏರಿವೆ. ಇದಕ್ಕೆ ವ್ಯತಿರಿಕ್ತವಾಗಿ ನಾಲ್ಕು ಬ್ಯಾಂಕುಗಳು ತಮ್ಮ ಸ್ಥಾನದಿಂದ ಒಂದೇ ಸಮನೆ ಕೆಳಗಿಳಿದಿವೆ 13 ಬ್ಯಾಂಕುಗಳು ಒಟ್ಟಿನಲ್ಲಿ ತಮ್ಮ ಸ್ಥಾನವನ್ನು ಉತ್ತಮಪಡಿಸಿಕೊಂಡಿದ್ದರೂ ಏರಿಳಿತಗಳನ್ನು ಕಂಡಿವೆ. ಇದೇ ರೀತಿ 7 ಬ್ಯಾಂಕುಗಳು ಅನೇಕ ಏರಿಳಿತಗಳನ್ನು ಅನುಭವಿಸಿ ತಮ್ಮ ಸ್ಥಾನವನ್ನು ಕೊನೆಗೆ ಕಳೆದುಕೊಂಡಿವೆ. ಪಂಜಾಬ್ ನ್ಯಾಷನಲ್ ಬ್ಯಾಂಕು ಮತ್ತು ಯುನೈಟೆಡ್ ಬ್ಯಾಂಕ್ ಆಫ್ ಇಂಡಿಯಾ ಬಹಳ ವೇಗವಾಗಿ ಓಡಿ ಏರಿ ಇಳಿದು ತಮ್ಮ ಸ್ಥಾನವಾದ 3ನೇ ಮತ್ತು 13ನೆಯ ಸ್ಥಾನಗಳನ್ನು ಉಳಿಸಿಕೊಳ್ಳುವಲ್ಲಿ ಯಶಸ್ವಿಯಾಗಿವೆ. ಈ ಹಾವು ಏಣಿ ಆಟದಲ್ಲಿ ತಮ್ಮ ಮೊದಲಿನ ಸ್ಥಾನ ಉಳಿಸಿಕೊಳ್ಳುವುದೂ ಒಂದು ದೊಡ್ಡ ಪ್ರಯಾಸದ ಕೆಲಸವೇ ಆಗಿದೆ.

ಬ್ಯಾಂಕ್ ಆಫ್ ಮಹಾರಾಷ್ಟ್ರ ತನ್ನ 1960ರ 19ನೆಯ ಸ್ಥಾನದಿಂದ 16ನೆಯ ಸ್ಥಾನಕ್ಕೆ ಏರಿ ಅನಂತರ 7 ವರ್ಷಗಳಲ್ಲಿ 14ನೆಯ ಸ್ಥಾನವನ್ನು ಆಕ್ರಮಿಸಿಕೊಂಡಿದೆ. ಇದೇ ರೀತಿ ಕೆನರಾ ಬ್ಯಾಂಕ್ 10ರಿಂದ 6ನೆಯ ಸ್ಥಾನ ಮತ್ತು ಕಾರ್ಪೊರೇಷನ್ ಬ್ಯಾಂಕ್ 27ರಿಂದ 25ನೆಯ ಸ್ಥಾನವನ್ನು ಏರಿದೆ.

ಇನ್ನು ಕೆಲವು ಬ್ಯಾಂಕುಗಳು ತಮ್ಮ ಸ್ಥಾನಗಳನ್ನು ಕಳೆದುಕೊಂಡಿವೆ. ಸ್ಟೇಟ್ ಬ್ಯಾಂಕ್ ಆಫ್ ಮೈಸೂರು 10 ಮೆಟ್ಟಿಲು ಇಳಿದಿವೆ. ಸ್ಟೇಟ್ ಬ್ಯಾಂಕ್ ಆಫ್ ಸೌರಾಷ್ಟ್ರ 8. ದೇನಾ ಬ್ಯಾಂಕ್ 6, ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯಾ 3 ಮೆಟ್ಟಿಲುಗಳನ್ನು ಇಳಿದು ತಮ್ಮ ಮೊದಲಿನ ಸ್ಥಾನವನ್ನು ಉಳಿಸಿಕೊಳ್ಳುವಲ್ಲಿ ವಿಫಲವಾಗಿವೆ.

ಇನ್ನು ಕೆಲವು ಬ್ಯಾಂಕುಗಳು ಏರಿಳಿತಗಳನ್ನು ಕಂಡರೂ ತಮ್ಮ ಸ್ಥಾನಗಳನ್ನು ಉತ್ತಮಪಡಿಸಿಕೊಂಡಿವೆ. ಈ ದಿಶೆಯಲ್ಲಿ ವಿಜಯಾ ಬ್ಯಾಂಕ್ 10 ಮೆಟ್ಟಿಲು, ಪಂಜಾಬ್ ಮತ್ತು ಸಿಂಧ್ ಬ್ಯಾಂಕ್ 7 ಮೆಟ್ಟಿಲು, ಓರಿಯಂಟಲ್ ಬ್ಯಾಂಕ್ ಆಫ್ ಕಾಮರ್ಸ್ 4 ಮೆಟ್ಟಿಲು, ಸಿಂಡಿಕೇಟ್ ಬ್ಯಾಂಕ್ ಮತ್ತು ಯೂನಿಯನ್ ಬ್ಯಾಂಕ್ ತಲಾ 3 ಮೆಟ್ಟಿಲು, ಬ್ಯಾಂಕ್ ಆಫ್ ಇಂಡಿಯಾ, ಬ್ಯಾಂಕ್ ಆಫ್ ಬರೋಡ ಮತ್ತು ಇಂಡಿಯನ್ ಓವರ್‌ಸೀಸ್ ಬ್ಯಾಂಕ್, ಆಂಧ್ರ ಬ್ಯಾಂಕ್. ನ್ಯೂ ಬ್ಯಾಂಕ್ ಆಫ್ ಇಂಡಿಯಾ ಮತ್ತು ಕಾರ್ಪೊರೇಷನ್ ಬ್ಯಾಂಕ್ ತಲಾ 2 ಮೆಟ್ಟಿಲು ಮೇಲೆ ಏರಿವೆ. ಕೆಲವು ಬ್ಯಾಂಕುಗಳು ಅನೇಕ ಏರಿಳಿತಗಳನ್ನು ಅನುಭವಿಸಿ ಕೊನೆಗೂ ತಮ್ಮ ಮೊದಲ ಸ್ಥಾನಗಳನ್ನು ಕಳೆದುಕೊಂಡಿವೆ. ಈ ದಿಶೆಯಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಬಿಕನೀರ್ 7 ಮೆಟ್ಟಿಲು, ಸ್ಟೇಟ್ ಬ್ಯಾಂಕ್ ಆಫ್ ಇಂದೋರ್ ಮತ್ತು ಅಲಹಾಬಾದ್ ಬ್ಯಾಂಕ್ ತಲಾ 5 ಮೆಟ್ಟಿಲು, ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್ ಮತ್ತು ಸ್ಟೇಟ್ ಬ್ಯಾಂಕ್ ಆಫ್ ಪಾಟಿಯಾಲ 4 ಮೆಟ್ಟಿಲು. ಇಂಡಿಯನ್ ಬ್ಯಾಂಕ್ 3 ಮೆಟ್ಟಿಲು, ಯುನೈಟೆಡ್ ಕಮರ್ಷಿಯಲ್ ಬ್ಯಾಂಕ್ 2 ಮೆಟ್ಟಿಲು, ಸ್ಟೇಟ್ ಬ್ಯಾಂಕ್ ಆಫ್ ಟ್ರಾವಂಕೂರ್ 1 ಮೆಟ್ಟಿಲು ಕೆಳಗೆ ಇಳಿದಿರುವುದು ಕಂಡುಬರುತ್ತದೆ.

## ಇತರ ವ್ಯತ್ಯಾಸಗಳು

1969ರಿಂದ 1984ರ ವೇಳೆಗೆ ಠೇವಣಿಯಲ್ಲಿ 14 ರಾಷ್ಟ್ರೀಕೃತ ಬ್ಯಾಂಕುಗಳು 22ರಷ್ಟು ಬೆಳವಣಿಗೆ ಹೊಂದಿದ್ದರೆ ಅನಂತರ ರಾಷ್ಟ್ರೀಕರಿಸಲ್ಪಟ್ಟ 6 ಬ್ಯಾಂಕುಗಳು ಇದೇ ಸಮಯದಲ್ಲಿ 36ರಷ್ಟು ಬೆಳವಣಿಗೆ ಹೊಂದಿವೆ ಭಾರತೀಯ ಸ್ಟೇಟ್‌ಬ್ಯಾಂಕಿನ ಸಹ ಬ್ಯಾಂಕುಗಳು ಇದೇ ಸಮಯದಲ್ಲಿ ಕೇವಲ 16ರಷ್ಟು ಬೆಳವಣಿಗೆ ಹೊಂದಿ ಹಿಂದೆ ಬಿದ್ದಿವೆ. 1989ರ ಮಾರ್ಚ್ 31ಕ್ಕೆ ಅಂತ್ಯರಾದ ಒಂದು ವರ್ಷದಲ್ಲಿ ಬ್ಯಾಂಕುಗಳು ರೂ. 25,879 ಕೋಟಿ ಠೇವಣಿ ಸಂಗ್ರಹಿಸಿವೆ. (21.9% ಹೆಚ್ಚಳ) 1987–88ರಲ್ಲಿ ರೂ. 15,321 ಕೋಟಿ ಠೇವಣಿ ಸಂಗ್ರಹವಾಗಿತ್ತು (14.9% ಹೆಚ್ಚಳ). ಈ ಠೇವಣಿ ಹೆಚ್ಚಳದಲ್ಲಿ ಹೊಸ ಬ್ಯಾಂಕು ಶಾಖೆಗಳು ಶೇಖರಿಸಿದ ಹಣ ಎಷ್ಟು, ಈವರೆಗೂ ಬ್ಯಾಂಕಿಂಗ್ ಪರಿಧಿಗೆ ಬರದೆ, ಮನೆ ಕಪಾಟು ಮಡಿಕೆ ಕುಡಿಕೆಗಳಲ್ಲಿ ಕೂಡಿಟ್ಟಿದ್ದು, ಬ್ಯಾಂಕಿಂಗ್ ಪರಿಧಿಗೆ ಬಂದ ಹಣ ಎಷ್ಟು ಮತ್ತು ನಿಜವಾದ ಸಾಮಾನ್ಯ ಬೆಳವಣಿಗೆ ಹಣ ಎಷ್ಟು ಎಂಬುದು ವಿಶ್ಲೇಷಿಸಬೇಕಾದ ವಿಚಾರ.

1956ರಲ್ಲಿ ದೇಶದಲ್ಲಿ 98,000 ಜನಸಂಖ್ಯೆಗೆ ಒಂದರಂತೆ ಬ್ಯಾಂಕ್ ಶಾಖೆ ಇದ್ದುದು 1969ರಲ್ಲಿ 64,000ಕ್ಕೆ ಒಂದು, 1981ರಲ್ಲಿ 19,000ಕ್ಕೆ ಒಂದು, 1983ರಲ್ಲಿ 17,000ಕ್ಕೆ ಒಂದು, 1985ರಲ್ಲಿ 15.000ಕ್ಕೆ ಒಂದು. 1986ರಲ್ಲಿ 14,000ಕ್ಕೆ ಒಂದು ಬ್ಯಾಂಕ್ ಶಾಖೆ ಇದ್ದುವು. ಈಗ ದೇಶದಲ್ಲಿ 59·000 ಬ್ಯಾಂಕ್ ಶಾಖೆಗಳಿವೆ. ಪ್ರತಿ 13,000 ಜನಸಂಖ್ಯೆಗೆ ಒಂದರಂತೆ ಬ್ಯಾಂಕ್ ಶಾಖೆಗಳಿವೆ ಎಂದು ಅಂದಾಜು.

ಬ್ಯಾಂಕುಗಳ ಒಟ್ಟು ಲಾಭ (ಪ್ರಕಟಿತ) 1984ರಲ್ಲಿ ರೂ. 107.35 ಕೋಟಿ, 1985ರಲ್ಲಿ ರೂ.

# ಭಾರತದಲ್ಲಿ ಬ್ಯಾಂಕಿಂಗ್ 1960-89

(ಮೊಬಲಗು ಕೋಟಿ ರೂ.ಗಳಲ್ಲಿ)

| ಸಂ. | ಬ್ಯಾಂಕು | ಡಿಸೆಂಬರ್ ಕೊನೆಯಲ್ಲಿದ್ದಂತೆ 1960 | ಸ್ಥಾನ | 1969 | ಸ್ಥಾನ | 1980 | ಸ್ಥಾನ | 1984 | ಸ್ಥಾನ | 31-3-89ರಲ್ಲಿದ್ದಂತೆ 1989 | ಸ್ಥಾನ |
|---|---|---|---|---|---|---|---|---|---|---|---|
| 1 | ಭಾರತೀಯ ಸ್ಟೇಟ್ ಬ್ಯಾಂಕ್ | 577 | 1 | 1,114 | 1 | 8,178 | 1 | 19689 | 1 | 37,334 | 1 |
| 2 | ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯ | 195 | 2 | 482 | 2 | 2,365 | 3 | 4693 | 5 | 9,492 | 5 |
| 3 | ಪಂಜಾಬ್ ನ್ಯಾಷನಲ್ ಬ್ಯಾಂಕ್ | 130 | 3 | 383 | 4 | 2,396 | 2 | 4,724 | 4 | 10,860 | 3 |
| 4 | ಬ್ಯಾಂಕ್ ಆಫ್ ಇಂಡಿಯ | 106 | 4 | 432 | 3 | 2,083 | 4 | 6,021 | 2 | 13,036 | 2 |
| 5 | ಯುಕೊ ಬ್ಯಾಂಕ್ | 85 | 5 | 248 | 6 | 1,349 | 8 | 3,055 | 9 | 7,288 | 7 |
| 6 | ಬ್ಯಾಂಕ್ ಆಫ್ ಬರೋಡ | 84 | 6 | 352 | 5 | 1,975 | 5 | 5,611 | 3 | 10,134 | 4 |
| 7 | ಅಲಹಾಬಾದ್ ಬ್ಯಾಂಕ್ | 50 | 7 | 122 | 13 | 716 | 15 | 1,710 | 13 | 4,034 | 12 |
| 8 | ಇಂಡಿಯನ್ ಬ್ಯಾಂಕ್ | 39 | 8 | 89 | 14 | 982 | 12 | 2,372 | 12 | 5,071 | 9 |
| 9 | ದೇನಾ ಬ್ಯಾಂಕ್ | 35 | 9 | 134 | 11 | 754 | 13 | 1,460 | 15 | 2,698 | 15 |
| 10 | ಕೆನರಾ ಬ್ಯಾಂಕ್ | 29 | 10 | 180 | 8 | 1,856 | 6 | 4,324 | 6 | 9,340 | 6 |
| 11 | ಸಿಂಡಿಕೇಟ್ ಬ್ಯಾಂಕ್ | — | 11 | 145 | 10 | 1,393 | 7 | 3,625 | 7 | 6,010 | 8 |
| 12 | ಇಂಡಿಯನ್ ಓವರ್ಸೀಸ್ ಬ್ಯಾಂಕ್ | 28 | 12 | 87 | 15 | 1,067 | 11 | 3,229 | 8 | 5,590 | 10 |
| 13 | ಯುನೈಟೆಡ್ ಬ್ಯಾಂಕ್ ಆಫ್ ಇಂಡಿಯ | 28 | 13 | 168 | 9 | 1,170 | 10 | 2,819 | 10 | 3,997 | 13 |
| 14 | ಯೂನಿಯನ್ ಬ್ಯಾಂಕ್ ಆಫ್ ಇಂಡಿಯಃ | — | 14 | 133 | 12 | 1,263 | 9 | 2,445 | 11 | 5,143 | 11 |
| 15 | ಬಿಕನೀರ್ ಜೈಪುರ ಬ್ಯಾಂಕ್ | 23 | 15 | 241 | 7 | 363 | 21 | 914 | 18 | 1,903 | 22 |
| 16 | ಮೈಸೂರ್ ಬ್ಯಾಂಕ್ | 20 | 16 | 49 | 21 | 314 | 24 | 693 | 25 | 1,291 | 26 |
| 17 | ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್ | 19 | 17 | 53 | 17 | 373 | 20 | 834 | 22 | 1,907 | 21 |
| 18 | ಆಂಧ್ರ ಬ್ಯಾಂಕ್ | 14 | 18 | 50 | 19 | 545 | 16 | 1,368 | 16 | 2,647 | 16 |
| 19 | ಬ್ಯಾಂಕ್ ಆಫ್ ಮಹಾರಾಷ್ಟ್ರ | 14 | 19 | 85 | 16 | 735 | 14 | 1,566 | 14 | 2,842 | 14 |
| 20 | ಸ್ಟೇಟ್ ಬ್ಯಾಂಕ್ ಆಫ್ ಸೌರಾಷ್ಟ್ರ | 13 | 20 | 39 | 22 | 213 | 27 | 503 | 27 | 948 | 28 |
| 21 | ಸ್ಟೇಟ್ ಬ್ಯಾಂಕ್ ಆಫ್ ಪಾಟಿಯಾಲ | 11 | 21 | 53 | 18 | 342 | 22 | 825 | 23 | 2,364 | 17 |
| 22 | ಸ್ಟೇಟ್ ಬ್ಯಾಂಕ್ ಆಫ್ ಇಂದೋರ್ | 9 | 22 | 26 | 23 | 160 | 28 | 399 | 28 | 1,059 | 27 |
| 23 | ಸ್ಟೇಟ್ ಬ್ಯಾಂಕ್ ಆಫ್ ಟ್ರಾವಂಕೂರ್ | 8 | 23 | 49 | 20 | 240 | 23 | 843 | 21 | 1,608 | 24 |
| 24 | ಓರಿಯೆಂಟಲ್ ಬ್ಯಾಂಕ್ ಆಫ್ ಕಾಮರ್ಸ್ | 5 | 24 | 22 | 25 | 276 | 25 | 752 | 24 | 2,008 | 20 |
| 25 | ನ್ಯೂ ಬ್ಯಾಂಕ್ ಆಫ್ ಇಂಡಿಯ | 4 | 25 | 24 | 24 | 449 | 18 | 850 | 20 | 1,778 | 23 |
| 26 | ಪಂಜಾಬ್ ಮತ್ತು ಸಿಂಧ್ ಬ್ಯಾಂಕ್ | 2 | 26 | 8 | 28 | 531 | 17 | 1,133 | 17 | 2,100 | 19 |
| 27 | ಕಾರ್ಪೊರೇಷನ್ ಬ್ಯಾಂಕ್ | — | 27 | 21 | 26 | 244 | 26 | 658 | 26 | 1,298 | 25 |
| 28 | ವಿಜಯಾ ಬ್ಯಾಂಕ್ | 1 | 28 | 18 | 27 | 405 | 19 | 873 | 19 | 2,107 | 18 |

160.80 ಕೋಟಿ, 1986ರಲ್ಲಿ ರೂ. 186 ಕೋಟಿ ಎಂದು ಅಂದಾಜು.

ಈಗಿನ ನಿಯಮಗಳ ಪ್ರಕಾರ ಬ್ಯಾಂಕುಗಳು ತಮ್ಮ ಠೇವಣಿಗಳ ಮೊಬಲಗಿನ ಶೇ. 15ರಷ್ಟನ್ನು ನಗದಾಗಿಯೂ ಶೇ. 38.5ರಷ್ಟನ್ನು ಸುಲಭವಾಗಿ ನಗದೀಕರಿಸುವ ಪತ್ರಗಳಲ್ಲೂ ಶೇ. 40ರಷ್ಟನ್ನು ಆದ್ಯತಾ ವಲಯಗಳಿಗೆ ಉದರಿಯ ರೂಪದಲ್ಲೂ ತೊಡಗಿಸಬೇಕಾಗಿದೆ. ಇದರಲ್ಲಿ ವ್ಯವಸಾಯಕ್ಕೆ ಶೇ. 18, ಸಣ್ಣ ಕೈಗಾರಿಕೆಗೆ ಶೇ. 12½, ಭಿನ್ನಕ ಬಡ್ಡಿ ದರದ ಸಾಲ ಶೇ. 1 ಕೊಡಬೇಕಾಗಿದೆ. ಉಳಿದದ್ದನ್ನು ವ್ಯಾಪಾರ ಮತ್ತು ದೊಡ್ಡ ಕೈಗಾರಿಕೆಗಳಿಗೆ ಕೊಡಬಹುದಾಗಿದೆ. 1960ರಲ್ಲಿ ಬ್ಯಾಂಕುಗಳು ಆಗಿನ ನಿಯಮಗಳ ಪ್ರಕಾರ ಸುಮಾರು ಶೇ. 6ನ್ನು ನಗದಾಗಿ ಇಡುತ್ತಿದ್ದವು. ಸುಲಭವಾಗಿ ನಗದೀಕರಿಸಬಹುದಾದ ಪತ್ರಗಳಲ್ಲಿ ಈಗಿನ ಶೇ. 38.5ಕ್ಕಿಂತ ಬಹಳ ಕಡಿಮೆ ಹಣ ತೊಡಗಿಸಬೇಕಾಗಿತ್ತು. ಇನ್ನೂ ಇದ ನಿರ್ಬಂಧಗಳು ಇರಲಿಲ್ಲ. ಆಗ ಸಾಲ ಪಡೆಯಲು ಸಾಲಗಾರ ಕೊಡಬಹುದಾದ ಆಧಾರ ಮುಖ್ಯವಾಗಿತ್ತು. ಈಗ ಉದ್ದೇಶ ಮುಖ್ಯ. ಆಗ ನಗರ ಮತ್ತು ಪಟ್ಟಣ ಪ್ರದೇಶಗಳಲ್ಲಿ ಹೆಚ್ಚು ಬ್ಯಾಂಕ್ ಶಾಖೆಗಳು ಇದ್ದವು. ಈಗ ಶೇ. 50ರಷ್ಟು ಶಾಖೆಗಳು ಹಳ್ಳಿಗಾಡಿನಲ್ಲಿವೆ. ಆಗ ಬ್ಯಾಂಕುಗಳು ಸಾಹುಕಾರರಿಗೆ ಮಾತ್ರ ಎಂಬ ಭಾವನೆ ಇತ್ತು. ಈಗ ಬಡವರಿಗೂ ಒದಗಿಬರುತ್ತವೆ. ಬರೀ ಕೈಯಿಂದಲೇ ಕೆಲಸ ನಡಸಬೇಕಿತ್ತು. ಈಗ ಆ ಸ್ಥಾನವನ್ನು ಗಣಕ ಯಂತ್ರಗಳು ಆಕ್ರಮಿಸಿಕೊಳ್ಳುತ್ತಿವೆ.

1990ರ ಮಾರ್ಚ್ 31ರಂದು ಇದ್ದಂತೆ ಬ್ಯಾಂಕುಗಳ ನಡುವೆ ಇನ್ನೂ ಕೆಲವು ವ್ಯತ್ಯಾಸಗಳನ್ನು ಗುರುತಿಸಬಹುದಾಗಿದೆ. ಅತ್ಯಂತ ಹೆಚ್ಚಿನ ಠೇವಣಿ ಹೊಂದಿದ ಶಾಖೆ ಬ್ಯಾಂಕ್ ಆಫ್ ಇಂಡಿಯಾದ್ದು (ರೂ. 6.19 ಕೋಟಿ). ಅದೇ ರೀತಿ ಅತಿ ಕಮ್ಮಿ ಠೇವಣಿ ಹೊಂದಿದ ಶಾಖೆ ದೇನಾ ಬ್ಯಾಂಕಿನದು (ರೂ. 2.53 ಕೋಟಿ). ಇದರ ಸರಾಸರಿ ಶಾಖಾ ಠೇವಣಿ ರೂ. 3.60 ಕೋಟಿ ಇತ್ತು.

ಪ್ರತಿ ಸಿಬ್ಬಂದಿಗೆ ಹೆಚ್ಚಿನ ಠೇವಣಿ ಇರುವ ಪ್ರಶಸ್ತಿ ಮತ್ತೆ ಬ್ಯಾಂಕ್ ಆಫ್ ಇಂಡಿಯಾಗೆ ಸಲ್ಲುತ್ತದೆ. ಪ್ರತಿ ಸಿಬ್ಬಂದಿಗೆ ರೂ. 25.59 ಲಕ್ಷ. ಪ್ರತಿ ಸಿಬ್ಬಂದಿಗೆ ಅತ್ಯಂತ ಕಡಿಮೆ ಠೇವಣಿ ಹೊಂದಿದ ಬ್ಯಾಂಕ್ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು (ರೂ. 12.84 ಲಕ್ಷ). ಪ್ರತಿ ಸಿಬ್ಬಂದಿಯ ಸರಾಸರಿ ಠೇವಣಿ ರೂ. 17.88. 15 ಬ್ಯಾಂಕುಗಳು ಸರಾಸರಿಗಿಂತ ಕೆಳಗೆ ಇದ್ದವು. 13 ಬ್ಯಾಂಕುಗಳು ಸರಾಸರಿಗಿಂತ ಜಾಸ್ತಿ ಠೇವಣಿ ಹೊಂದಿದ್ದವು.

ಪ್ರತಿ ಶಾಖೆಗೆ ಅತಿ ಹೆಚ್ಚು ಸಿಬ್ಬಂದಿ

[23ನೇ ಪುಟ ನೋಡಿ]

# ವಿದೇಶಿ ವಿನಿಮಯ ಮೀಸಲುಗಳ ನಿರ್ವಹಣೆ*

## ಈ ಪ್ರಕ್ರಿಯೆಗೊಂದು ಮೂಲಭೂತ ಮಾರ್ಗದರ್ಶನ

ಮೂಲ: **ಪ್ಯಾಟ್ರಿಕ್ ಟಿ. ಡೌನ್ಸ್**

ಅನುವಾದ: **ಕಬ್ಬಿನಾಲೆ ವಸಂತ ಭಾರದ್ವಾಜ್**, ಮೈಸೂರು ಬ್ಯಾಂಕು. ಹಾಸನ ಶಾಖೆ 573 291 **ಎಂ. ಎಸ್. ನರಸಿಂಹಮೂರ್ತಿ**, ಕನ್ನಡ ವಿಭಾಗ, ಮೈಸೂರು ಬ್ಯಾಂಕು, ಪ್ರಧಾನ ಕಛೇರಿ. ಬೆಂಗಳೂರು–560 009. **ಕಮಲ**, ಮೈಸೂರು ಬ್ಯಾಂಕು. ಶಂಕರಪುರ ಶಾಖೆ. ಬೆಂಗಳೂರು–560 004. **ಸಿ. ಎಸ್. ಸರ್ವಮಂಗಳ, ಮನೋಹರ ಗೋಖಲೆ**, ಕನ್ನಡ ವಿಭಾಗ, ಮೈಸೂರು ಬ್ಯಾಂಕು. ಪ್ರಧಾನ ಕಛೇರಿ. ಬೆಂಗಳೂರು–560 009. **ಎನ್. ಎಂ. ಕೃಷ್ಣಮೂರ್ತಿ**, ಮೈಸೂರು ಬ್ಯಾಂಕು, ರವೀಂದ್ರನಗರ ಬಡಾವಣೆ ಶಾಖೆ. ಶಿವಮೊಗ್ಗ–577 202, **ಸಿ. ಕೆ. ರಂಗಾಚಾರ್**, ಮೈಸೂರು ಬ್ಯಾಂಕು. ವಲಯ ಕಛೇರಿ. ಮೈಸೂರು–570 023. **ನಾರಾಯಣ ಜೋಯಿಸ್**, ಮೈಸೂರು ಬ್ಯಾಂಕು. ಅರಸೀಕೆರೆ ಶಾಖೆ. **ತ್ಯಾ. ನಂ. ನಾಗಾನಂದ**, ಭಾರತೀಯ ಸ್ಟೇಟ್ ಬ್ಯಾಂಕ್. ಜೆ. ಪಿ. ನಗರ ಶಾಖೆ. ಬೆಂಗಳೂರು. **ಜಯರಾಂ, ಎಚ್. ಕೆ.** ಭಾರತೀಯ ಸ್ಟೇಟ್ ಬ್ಯಾಂಕ್. ಮೈಸೂರು ಶಾಖೆ. 570 023. **ಹೇಮಚಂದ್ರ**, ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್ ಮುಖ್ಯಶಾಖೆ. ರಾಯಚೂರು–584 101

(ಕೋಲಾರದಲ್ಲಿ ಏಪ್ರಿಲ್ ೨೭ರಿಂದ ಮೇ ೩ರ ವರೆಗೆ ನಡೆದ ಬ್ಯಾಂಕಿಂಗ್ ಕಮ್ಮಟದಲ್ಲಿ ಸಾಮೂಹಿಕವಾಗಿ ಮಾಡಿದ ಅನುವಾದ)

ಕೇಂದ್ರ ಬ್ಯಾಂಕುಗಳಿಂದ ಮೀಸಲುಗಳ ಸಕ್ರಿಯ ನಿರ್ವಹಣೆ ಮತ್ತು ಅವುಗಳ ಮೀಸಲು ಪೋರ್ಟ್‌ಫೋಲಿಯಗಳ ಹೆಚ್ಚಿನ ವಿವಿಧೀಕರಣ 1970ರ ದಶಕದಲ್ಲಿ ವಾಡಿಕೆಗೆ ಬಂತು. ಅವುಗಳ ಮೀಸಲು ಆಸ್ತಿಗಳ ನೈಜಮೌಲ್ಯವನ್ನು ಕಾಪಾಡಬೇಕೆಂಬ ಅಥವಾ ವಿಶ್ವದ ದ್ರವ್ಯ ತೀವ್ರವಾಗಿ ಏರುತ್ತಿದ್ದ ಕಾಲದಲ್ಲಿ ಕನಿಷ್ಠ ಪಕ್ಷ ತಮ್ಮ ನಾಮಮಾತ್ರ ಪ್ರತಿಫಲವನ್ನಾದರೂ ಹೆಚ್ಚಿಸಿಕೊಳ್ಳಬೇಕೆಂಬ ಕೇಂದ್ರ ಬ್ಯಾಂಕ್ ಪ್ರಾಧಿಕಾರಿಗಳ ಆಕಾಂಕ್ಷೆಯಿಂದ ಈ ಪ್ರಕ್ರಿಯೆ ಉದ್ದೀಪನಗೊಂಡಿತು.

1970ರ ದಶಕದಲ್ಲಿ ಮುಖ್ಯವಾಗಿ ಬಡ್ಡಿ ದರಗಳು ಮತ್ತು ವಿನಿಮಯ ದರಗಳ ವ್ಯಾಪಕ ಏರಿಳಿತಗಳ ಎದುರಿನಲ್ಲಿ ತೈಲ ಮತ್ತಿತರ ಪದಾರ್ಥಗಳ ಉತ್ಪಾದಕರು ತಮ್ಮ ಹೆಚ್ಚುತ್ತಿರುವ ಮೀಸಲುಗಳನ್ನು ಹೆಚ್ಚು ಸಮರ್ಪಕವಾಗಿ ನಿರ್ವಹಿಸುವ ಅಗತ್ಯವನ್ನು ಕಂಡುಕೊಂಡರು.

ಕೇಂದ್ರ ಬ್ಯಾಂಕರುಗಳ ವಿದೇಶಿ ವಿನಿಮಯ ಮೀಸಲುಗಳ ನಿರ್ವಹಣೆ ಕುರಿತ ಅಭಿಗಮನ ವಿಶ್ವದ್ಯಂತ ವಿಭಿನ್ನವಾಗಿದೆ. ದಿನ್ನ ನಿರ್ಲಕ್ಷ್ಯ ನೀತಿಯಿಂದ ಹಿಡಿದು, ನಷ್ಟಸಂಭಾವ್ಯತೆಯನ್ನು ಕಡಿಮೆಗೊಳಿಸುವ ಮತ್ತು ಲಾಭಪ್ರದತೆಯನ್ನು ಹೆಚ್ಚಿಸುವ ಪರ್ಯಾಯ ಕ್ರಮಗಳನ್ನು ಕುರಿತ ವಿವರವಾದ ಮತ್ತು ಸೂಕ್ಷ್ಮವಾದ ಗಣಿತೀಯ ಲೆಕ್ಕಾಚಾರಗಳ ವರೆಗೆ ಇದು ವ್ಯಾಪಿಸಿದೆ. ಅನೇಕ ಅಭಿವೃದ್ಧಿಶೀಲ ದೇಶಗಳು ತಮ್ಮ ಮೀಸಲು ಅಗತ್ಯಗಳನ್ನು ಅಳೆಯುವ ಯಾವುದೇ ಔಪಚಾರಿಕ ವಿಧಾನಗಳನ್ನಾಗಲಿ, ಅವುಗಳ ನಿರ್ವಹಣೆಗೆ ನಿಶ್ಚಿತ ಉದ್ದೇಶಗಳನ್ನಾಗಲಿ ಇನ್ನೂ ರೂಪಿಸಿಕೊಂಡಿಲ್ಲ. ಈ ವಿಷಯದ ಬಗ್ಗೆ ಇತ್ತೀಚಿನ ವರ್ಷಗಳಲ್ಲಿ ವ್ಯಾಪಕ ಅಧ್ಯಯನ ನಡೆದಿಲ್ಲದಿರುವುದರಿಂದ ಈ ಚಟುವಟಿಕೆಯ ಹಿನ್ನೆಲೆಯ ಅಂಶಗಳ ಕುರಿತು ನೀತಿನಿರೂಪಕರಿಗೆ ಹೆಚ್ಚಿನ ಮಾರ್ಗದರ್ಶನ ಇಲ್ಲದಂತಾಗಿದೆ: ಈ ಕೊರತೆಯನ್ನು ತುಂಬಲು ನೆರವಾಗುವಂತೆ ವಿದೇಶಿ ವಿನಿಮಯ ಮೀಸಲು ನಿರ್ವಹಣಾ ನೀತಿಯೊಂದನ್ನು ರೂಪಿಸಿ ಅನುಷ್ಠಾನಕ್ಕೆ ತರಲು ಈ ಲೇಖನ ಒಂದು ಮೂಲಭೂತ ಚೌಕಟ್ಟನ್ನು ಒದಗಿಸುತ್ತದೆ.

* 'ಫೈನಾನ್ಸ್ ಅಂಡ್ ಡೆವೆಲಪ್‌ಮೆಂಟ್'ನ ಡಿಸೆಂಬರ್ 1986ರ ಸಂಚಿಕೆಯಲ್ಲಿ ಪ್ರಕಟವಾದ Managing Foreign Exchange Reserves ಎಂಬ ಲೇಖನದ ಅನುವಾದ

ನಿರ್ಯಾತ ಸ್ವೀಕಾರಗಳ, ಆಯಾತ ಪಾವತಿಗಳ, ಬಂಡವಾಳ ಹರಿವುಗಳ ಏರಿಳಿತಗಳಂಥ ಅಂಶಗಳ ಫಲವಾಗಿ ವಿನಿಮಯ ದರಗಳಲ್ಲಾಗುವ ಅತ್ಯಧಿಕ ಅಲ್ಪಕಾಲೀನ ಏರಿಳಿತಗಳನ್ನು ನಿವಾರಿಸಲು ಒಂದು ದೇಶ ಮೀಸಲುಗಳನ್ನು ಹೊಂದಿರಬೇಕಾಗುತ್ತದೆ. ಮೀಸಲು ನಿರ್ವಹಣಾ ನೀತಿ ನಿರೂಪಣೆ ಪ್ರಧಾನವಾಗಿ ಮೂರು ಹಂತಗಳ ಪ್ರಕ್ರಿಯೆ. ವಿವೇಚನಾಯುತವಾಗಿಯೂ ಲಾಭಪ್ರದವಾಗಿಯೂ ಇರುವ ಯುಕ್ತ ವಿನಿಯೋಜನ ತತ್ತ್ವವೊಂದನ್ನು ಅಳವಡಿಸಿಕೊಳ್ಳುವುದು ಮೊದಲನೆಯ ಹಂತ. ಮೀಸಲು ರಾಶಿಯಲ್ಲಿ ವಿವಿಧ ಚಲಾರ್ಥಗಳ ಆಯ್ಕೆ (ಚಲಾರ್ಥಮಿಶ್ರಣ) ಎರಡನೆಯದು. ಆಯ್ದ ಚಲಾರ್ಥಗಳನ್ನು ವಿವಿಧ ಬಂಡವಾಳ ಮತ್ತು ಹಣಮಾರುಕಟ್ಟೆಗಳಲ್ಲಿ ಯುಕ್ತ ವಿನಿಯೋಜನವಿನ್ಯಾಸ (ಪೋರ್ಟ್‌ಫೋಲಿಯೊ) ನಿರ್ವಹಣಾ ಸೂತ್ರಗಳ ಅಡಿಯಲ್ಲಿ ಯೋಗ್ಯ ಸಂಲೇಖಗಳಲ್ಲಿ ವಿನಿಯೋಜಿಸುವುದು ಮೂರನೆಯ ಹಂತ.

**ವಿನಿಯೋಜನ ತತ್ತ್ವ:** ಕೇಂದ್ರ ಬ್ಯಾಂಕಿನ ವಿನಿಯೋಜನ ತತ್ತ್ವವೆಂದರೆ ಪ್ರಮುಖವಾಗಿ ಮೀಸಲು ನಿರ್ವಹಣಾ ಉದ್ದೇಶಗಳ ಮತ್ತು ಅವುಗಳನ್ನು ಹೇಗೆ ಸಾಧಿಸಬೇಕೆಂಬುದರ ಒಂದು ವಿವರಣೆ. ಮೀಸಲು ಹೊಂದಿರುವುದರಲ್ಲಿ, ಅವುಗಳ ಪರ್ಯಾಯ ಆಂತರಿಕ ಬಳಕೆಯಿಂದ ದೊರೆಯುವ ಪ್ರತಿಫಲರೂಪದಲ್ಲಿ ಅಳೆಯಲಾಗುವ, ಆರ್ಥಿಕ ಅಥವಾ ಅವಕಾಶ ನಷ್ಟವೆಚ್ಚವೂ (ಅಪರ್ಚುನಿಟಿ ಕಾಸ್ಟ್) ಸೇರಿರುವುದರಿಂದ, ಮೀಸಲು ವಿನಿಯೋಜನ ವಿನ್ಯಾಸವನ್ನು ವಿವೇಚನಾಯುತವಾಗಿ, ಸಾಧ್ಯವಾಗುವಷ್ಟು ಲಾಭಪ್ರದವಾಗಿ ನಿರ್ವಹಿಸುವುದರ ಮೂಲಕ ಈ ವೆಚ್ಚಕ್ಕೆ ಪರಿಹಾರವನ್ನು ಒದಗಿಸುವುದು ಒಂದು ಮುಖ್ಯ ಉದ್ದೇಶವಾಗಿರಬೇಕು.

ಕೇಂದ್ರ ಬ್ಯಾಂಕುಗಳು ದೇಶದ ಮೀಸಲುಗಳನ್ನು ನಷ್ಟಸಂಭಾವ್ಯತೆಗೆ ಒಳಪಡಿಸಬಾರದು ಎಂದು ಸ್ಪಷ್ಟವಾಗಿ ಭಾವಿಸಲಾಗಿರುವುದರಿಂದ, ಬಂಡವಾಳ ಸುರಕ್ಷತೆ ಒಂದು ಪರಮಧ್ಯೇಯ. ಇನ್ನೊಂದು ಉದ್ದೇಶವೆಂದರೆ ಮೀಸಲು ವಿನಿಯೋಜನವಿನ್ಯಾಸಗಳ ದ್ರವತ್ವ; ಏಕೆಂದರೆ ಒಂದು ದೇಶ ತನ್ನ ವಿನಿಮಯ ದರದಲ್ಲಿ ಸ್ಥಿರತೆಯನ್ನು ಸಾಧಿಸುವುದಲ್ಲದೆ, ತನ್ನ ಪಾವತಿಗಳನ್ನು ಶೀಘ್ರವಾಗಿ ಪೂರೈಸುವುದು ಸಾಧ್ಯವಾಗುವಂತೆ ಇದು ಖಾತರಿಗೊಳಿಸುತ್ತದೆ.

ಈ ಉದ್ದೇಶಗಳತ್ತ ಸಾಗುವಲ್ಲಿ ಕೇಂದ್ರ ಬ್ಯಾಂಕುಗಳು ತಾವು ಯಾವ ದೇಶಗಳಲ್ಲಿ ವಿನಿಯೋಜನೆ ಮಾಡುವವೋ ಆ ದೇಶಗಳ ಕೇಂದ್ರ ಬ್ಯಾಂಕುಗಳು ಮತ್ತು ನಿಯಂತ್ರಣಪ್ರಾಧಿಕಾರಗಳೊಂದಿಗೆ ಸಹಕರಿಸಬೇಕು ಮತ್ತು ವಿದೇಶಿ ಮಾರುಕಟ್ಟೆಗಳನ್ನು ಅಸ್ತವ್ಯಸ್ತಗೊಳಿಸುವ ಕಾರ್ಯಗಳನ್ನು ಕೈಗೊಳ್ಳಬಾರದೆಂದು ನಿರೀಕ್ಷಿಸಲಾಗಿದೆ. ವಾಸ್ತವವಾಗಿ ಆ 30 ದೇಶಗಳ ಗುಂಪಿನ 1982ರ ಸರ್ವೇಕ್ಷಣದಲ್ಲಿ ಗುರುತಿಸಿರುವಂತೆ "ಅಸಂಗತ ವರ್ತನೆ ಅಥವಾ ನಿರ್ಲಕ್ಷ್ಯದ ಮತ್ತು ತಪ್ಪು ಮಾಹಿತಿಯಿಂದ ಕೂಡಿದ ಕರೆನ್ಸಿಗಳ (ಚಲಾರ್ಥಗಳ) ವ್ಯಾಪಾರ" ನಿಧಿಗಳನ್ನು ನಷ್ಟಸಂಭಾವ್ಯತೆಗೆ ಗುರಿಪಡಿಸುತ್ತದೆ ಮತ್ತು ನಷ್ಟಗಳಿಗೆ ಎಡೆಮಾಡಿಕೊಡುತ್ತದೆ.

**ಚಲಾರ್ಥ (ಕರೆನ್ಸಿ) ಮಿಶ್ರಣ (ಮಿಕ್ಸ್):** ಮೀಸಲುಗಳ ವಿನಿಯೋಜನ ವಿನ್ಯಾಸದಲ್ಲಿ ಚಲಾರ್ಥಗಳ ಯೋಗ್ಯ ಮಿಶ್ರಣದ ಪ್ರಶ್ನೆಯನ್ನು ಕುರಿತಂತೆ ಅತ್ಯಂತ ದಕ್ಷ ಮಾರುಕಟ್ಟೆಗಳಲ್ಲಿ ವಿದೇಶಿ ವಿನಿಮಯ ಮಾರುಕಟ್ಟೆಗಳೂ ಸೇರಿರುವುದರಿಂದ, ವ್ಯಾಪಕವಾಗಿ ವ್ಯಾಪಾರವಾಗುವ ಮತ್ತು ಸ್ವೀಕಾರಾರ್ಹವಾದ ಏಕೈಕ ಚಲಾರ್ಥವನ್ನು ಹೊಂದಿದ್ದರೆ ಸಾಕು ಎಂಬುದಾಗಿ ಪರಿಕಲ್ಪನಾತ್ಮಕವಾಗಿಯಾದರೂ ಒಂದು ವಾದವಿದೆ. ಮಾರುಕಟ್ಟೆ ಸಂಲೇಖಗಳ ಅತ್ಯುತ್ತಮ ಶ್ರೇಣಿಯಲ್ಲಿ ಕೊಳ್ಳಲು ಅವಕಾಶವಿರುವ ಚಲಾರ್ಥವನ್ನೇ ಹೊಂದಿರಬೇಕು. ಯು. ಎಸ್. ಡಾಲರ್‌ಗಳತ್ತ ಇದು ಬೆಟ್ಟು ಮಾಡುವಂತಿದೆ. ಏನೇ ಇರಲಿ, ವಿನಿಮಯ ದರಗಳಲ್ಲಿ ಗಮನಾರ್ಹ ಚಂಚಲತೆ ಇದ್ದಾಗ ಯು. ಎಸ್. ಡಾಲರ್‌ಗಳನ್ನೇ ಹೊಂದಿರುವುದರಿಂದ ವಿನಿಮಯ ನಷ್ಟಗಳಿಗೆ ತೀವ್ರವಾಗಿ ತೆರೆದುಕೊಂಡಂತಾಗುತ್ತದೆ. ಇದರ ಪರಿವೆ ಇಲ್ಲದೆ ಅನೇಕ ದೇಶಗಳು ತಮ್ಮ ಮೀಸಲುಗಳಲ್ಲಿ ಯು. ಎಸ್. ಡಾಲರ್‌ಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಹೊಂದಿವೆ.

ಉದಾ: 1986ರ ಕೊನೆಯಲ್ಲಿ ವಿಶ್ವಾದ್ಯಂತ ಗುರುತಿಸಲಾದ ಒಟ್ಟು ಅಧಿಕೃತ ವಿದೇಶಿ ವಿನಿಮಯ ಹಿಡುವಳಿಗಳಲ್ಲಿ ಯು. ಎಸ್. ಡಾಲರಿನಲ್ಲಿ ಅಂಕಿತಗೊಂಡ ಆಸ್ತಿಗಳು ಸರಾಸರಿಯಲ್ಲಿ ಶೇ 67ರಷ್ಟು ಇದ್ದುವು. ಅಭಿವೃದ್ಧಿಶೀಲ ದೇಶಗಳಲ್ಲಿ ಇವು ಶೇ 60ರಷ್ಟಿದ್ದರೆ, ಕೈಗಾರಿಕಾ ದೇಶಗಳಲ್ಲಿ ಇವು ಶೇ 71ರಷ್ಟು ಇದ್ದುವು.

ಯುಕ್ತ ಚಲಾರ್ಥ ಮಿಶ್ರಣವನ್ನು ನಿರ್ಧರಿಸುವಲ್ಲಿ ಗಣನೆಗೆ ತೆಗೆದುಕೊಳ್ಳಬಹುದಾದ ಇತರ ಅಂಶಗಳೆಂದರೆ—ವ್ಯಾಪಾರ ಮತ್ತು ಪಾವತಿ ವಿನ್ಯಾಸಗಳು—ಮುಖ್ಯವಾಗಿ ಬಾಹ್ಯ ಪಾವತಿಗಳಿಗೆ ಬೇಕಾಗುವ ಚಲಾರ್ಥಗಳು—ಮತ್ತು ದೇಶದ ವಿದೇಶಿ ಋಣದ ಚಲಾರ್ಥವ್ಯಾಪನೆ. ಆಚರಣೆಯಲ್ಲಿ, ಅಧಿಕೃತ ವಿದೇಶಿ ಹೊಣೆಗಳನ್ನು ಕೇಂದ್ರ ಬ್ಯಾಂಕುಗಳು ಸಾಮಾನ್ಯವಾಗಿ ಸ್ಥಿತಿ ವಿವರಣಪಟ್ಟಿಯಲ್ಲಿ ತೋರಿಸದಿರುವುದರಿಂದ, ಹಲವೊಮ್ಮೆ ಇವು ವಿದೇಶಿ ವಿನಿಮಯ ಮೀಸಲುಗಳಿಗಿಂತ ಗಮನಾರ್ಹವಾಗಿ ಅಧಿಕವಾಗಿರುವುದರಿಂದ, ವಿದೇಶಿ ಆಸ್ತಿಗಳು ಮತ್ತು ಹೊಣೆಗಳನ್ನು ಪರಸ್ಪರ ಹೊಂದಿಸುವುದು ಯಾವಾಗಲೂ ಕಾರ್ಯಸಾಧ್ಯವಲ್ಲ.

ಅಂತಿಮವಾಗಿ ಹೀಗೆ ವಿಶ್ಲೇಷಿಸಬಹುದು: ಮೀಸಲುಗಳನ್ನು ಆಯಾತಗಳ ಪಾವತಿಗಾಗಿ ಬಳಸಲಾಗುವುದು; ಆದ್ದರಿಂದ ಅವುಗಳ ಸ್ವಂತ ಖರೀದಿ ಸಾಮರ್ಥ್ಯದ ರಕ್ಷಣೆಯಾಗುವ ರೀತಿಯಲ್ಲಿ ವಿವಿಧ ಚಲಾರ್ಥಗಳಲ್ಲಿ ಮೀಸಲುಗಳ ಹಂಚಿಕೆಯಾಗಬೇಕು. ಒಟ್ಟಿನಲ್ಲಿ ಎಲ್ಲ ಮೊಟ್ಟೆಗಳನ್ನು ಒಂದೇ ಬುಟ್ಟಿಯಲ್ಲಿ ಹೊಂದಿರುವುದು ಜಾಣತನವಲ್ಲ ಎಂಬುದು ರೂಢಿಗತ ವಿವೇಕವಾಗಿದೆ.

ಅತ್ಯುತ್ತಮ ಚಲಾರ್ಥಮಿಶ್ರಣದ ಆಯ್ಕೆಯನ್ನು ಇತರ ಅಂಶಗಳು ಸೀಮಿತಗೊಳಿಸಬಹುದು. ದ್ರವತ್ವದ ಅಗತ್ಯವಿದೆ ಎನ್ನುವುದಾದರೆ ಮೀಸಲುಗಳು ಅಂತರರಾಷ್ಟ್ರೀಯವಾಗಿ ಸ್ವೀಕಾರಾರ್ಹವಾಗಿರಬೇಕು ಮತ್ತು ಸುಲಭವಾಗಿ ವಿಕ್ರಯಯೋಗ್ಯವಾಗಿರಬೇಕು ಎಂಬುದು ಮುಖ್ಯ. ವಿಶಾಲವಾದ ಸುಕೇಂದ್ರೀಕೃತವಾದ ಮತ್ತು ದಕ್ಷವಾದ ವಿದೇಶಿ ವಿನಿಮಯ ಮತ್ತು ಬಂಡವಾಳ ಮಾರುಕಟ್ಟೆಗಳನ್ನು ಹೊಂದಿದ ದೇಶಗಳ ಚಲಾರ್ಥಗಳತ್ತ ಇದು ಬೊಟ್ಟುಮಾಡುತ್ತದೆ. ಅವುಗಳ ಪೈಕಿ ಕೆಲವು ದೇಶಗಳ ಪ್ರಾಧಿಕಾರಿಗಳು ತಮ್ಮ ಚಲಾರ್ಥಗಳನ್ನು (ಕರೆನ್ಸಿಗಳನ್ನು) ಇತರ ಕೇಂದ್ರ ಬ್ಯಾಂಕುಗಳು ಹೊಂದಿರುವುದರ ಮಟ್ಟ ಮತ್ತು ಅವುಗಳ ಖರೀದಿ ಹಾಗೂ ಮಾರಾಟಗಳೆರಡರ ಕಾಲನಿಯಮನಕ್ಕೆ ಆಗಿಂದಾಗ್ಗೆ ಸಂವೇದನಾಶೀಲವಾಗಿಯೂ ಇರಬಹುದು.

ಅಲ್ಲದೆ, ಮೀಸಲುಗಳ ನಿರ್ವಹಣೆಯಲ್ಲಿ ದೇಶೀಯ ಚಲಾರ್ಥದ ಇದಿರು ವಿನಿಮಯದರ

---

## ಸರ್ಕಾರಿ ವಲಯದ ಬ್ಯಾಂಕುಗಳ ಪ್ರಗತಿ:

[22ನೇ ಪುಟದಿಂದ ಮುಂದುವರಿದುದು]

ಹೊಂದಿರುವ ಬ್ಯಾಂಕು ಭಾರತೀಯ ಸ್ಟೇಟ್ ಬ್ಯಾಂಕ್ (27). ಅತಿ ಕಡಿಮೆ ಸಿಬ್ಬಂದಿ ಇರುವ ಬ್ಯಾಂಕು ಅಲಹಾಬಾದ್ ಬ್ಯಾಂಕ್ (13). ದೇಶದ ಸರಾಸರಿ 20. ಸರಾಸರಿಗಿಂತ ಹೆಚ್ಚಿರುವ ಬ್ಯಾಂಕುಗಳು 15. ಸರಾಸರಿಗಿಂತ ಕಡಿಮೆ ಸಿಬ್ಬಂದಿ ಹೊಂದಿರುವ ಬ್ಯಾಂಕುಗಳು 13.

ಅತಿ ಹೆಚ್ಚಿನ ಠೇವಣಿ ಹೊಂದಿರುವ ಬ್ಯಾಂಕು ಭಾರತೀಯ ಸ್ಟೇಟ್ ಬ್ಯಾಂಕ್. (ರೂ. 37,334 ಕೋಟಿ). ಸ್ಟೇಟ್ ಬ್ಯಾಂಕ್ ಆಫ್ ಸೌರಾಷ್ಟ್ರ ಅತ್ಯಂತ ಕಡಿಮೆ ಠೇವಣಿ ಹೊಂದಿದೆ (ರೂ. 948 ಕೋಟಿ), 28 ಬ್ಯಾಂಕುಗಳ ಸರಾಸರಿ ರೂ. 5,140 ಕೋಟಿ. ಸರಾಸರಿಗಿಂತ ಕೆಳಗೆ 17 ಬ್ಯಾಂಕುಗಳೂ ಸರಾಸರಿಗಿಂತ ಮೇಲೆ 11 ಬ್ಯಾಂಕುಗಳೂ ಇದ್ದುವು. ●

ನಷ್ಟಸಂಭಾವ್ಯತೆಗಳು ನಿಹಿತವಾಗಿರುವುದರಿಂದ ವಿಶ್ವದ ಚಲಾರ್ಥಕ್ಷೇತ್ರಗಳಲ್ಲಿ (ಯು. ಎಸ್. ಡಾಲರ್, ಡಾಯಿಷ್ ಮಾರ್ಕ್, ಫ್ರೆಂಚ್ ಫ್ರಾಂಕ್, ಪೌಂಡ್ ಸ್ಟರ್ಲಿಂಗ್ ಮತ್ತು ಜಪಾನಿ ಯೆನ್) ಹರಡಿದ ಸುವಿವಿಧೀಕರಣಗೊಂಡ ಮೀಸಲುಗಳ ವಿನಿಯೋಜನವಿನ್ಯಾಸ ಅಗತ್ಯವಾಗಿರಬಹುದು. ಚಲಾರ್ಥ ಮಿಶ್ರಣವನ್ನು (ಕರೆನ್ಸಿ ಮಿಕ್ಸ್) ನಿರ್ಧರಿಸುವಾಗ ನಿಶ್ಚಿತ ಶೇಕಡಾವಾರುಗಳ ಬದಲು ಲಕ್ಷ್ಯಶ್ರೇಣಿಗಳಾಗಿ ಪ್ರಮಾಣಗಳನ್ನು ಅಭಿವ್ಯಕ್ತಿಸುವುದು ಉತ್ತಮ. ಈ ಅಭಿಗಮನ, ವಿನಿಯೋಜನವಿನ್ಯಾಸ ನಿರ್ವಹಣೆಯಲ್ಲಿ ವಿನಿಯೋಜನನಮ್ಯತೆಯೇ ಅಲ್ಲದೆ ಅಷ್ಟಿಷ್ಟು ಪರಿಚಾಲನಾನಮ್ಯತೆಯನ್ನು ಉಂಟುಮಾಡುತ್ತದೆ. ಮತ್ತು ಮೇಲಿಂದ ಮೇಲೆ ಹೊಂದಾಣಿಕೆಮಾಡಿಕೊಳ್ಳುವುದನ್ನು ನಿವಾರಿಸುತ್ತದೆ.

ವಿನಿಯೋಜನವಿನ್ಯಾಸ ನಿರ್ವಹಣೆ: ನಷ್ಟಸಂಭಾವ್ಯತೆಗಳನ್ನು ಕನಿಷ್ಠಗೊಳಿಸುವಾಗ ಪ್ರತಿಯೊಂದು ಚಲಾರ್ಥದ ಪ್ರತಿಫಲನವನ್ನು ಗರಿಷ್ಠಗೊಳಿಸುವುದು ವಿನಿಯೋಜನ ವಿನ್ಯಾಸದ ನಿರ್ವಹಣೆಯ ಉದ್ದೇಶವಾಗಿದೆ.

ಸಂಲೇಖಗಳ ಆಯ್ಕೆ: ವಿನಿಯೋಜನೆಯ ಸಂಲೇಖಗಳ ಆಯ್ಕೆ ಒಟ್ಟಾರೆ ನಷ್ಟಸಂಭಾವ್ಯತೆಯ ಭವಸಾಧ್ಯತೆಯನ್ನು ನಿರ್ಧರಿಸುತ್ತದೆ. ವಿನಿಯೋಜನೆಯ ಸುರಕ್ಷೆಗೆ (ಎಂದರೆ, ಕಟಬಾಕಿಯ ವಿರುದ್ಧ ರಕ್ಷಣೆಗೆ) ಆದ್ಯತೆ ಇರುವುದಾದರೆ ಪ್ರತಿಯೊಂದು ಆಯಾ ಚಲಾರ್ಥ ಮಾರುಕಟ್ಟೆಯಲ್ಲಿನ ಸಂಲೇಖಗಳು, ದೇಶೀಯ ಸರ್ಕಾರಿ ಪ್ರತಿಭೂತಿಗಳಿಗೆ, ಇತರೆ ಸರ್ಕಾರಿ ಖಾತರಿಯ ಅಭಿಕರಣಗಳ ಅಥವಾ ಎ.ಎ.ಎ. (ಎಂದರೆ ಗರಿಷ್ಠ) ಉದರಿ ಪ್ರತ್ಯಯ ಮಟ್ಟವುಳ್ಳ ಬಹುರಾಷ್ಟ್ರೀಯ ಸಂಸ್ಥೆಯೊಂದು ನೀಡಿದ ಋಣಕ್ಕೆ ಸೀಮಿತವಾಗಿರಬೇಕು. ಸ್ವಲ್ಪ ಕಡಿಮೆ ಉದರಿ ಪ್ರತ್ಯಯ ಮಟ್ಟವಾದ 'ಎ.ಎ.+ ನಷ್ಟಸಂಭಾವ್ಯತೆಯನ್ನು ಸ್ವತಂತ್ರ ಸರ್ಕಾರ ಎತ್ತುವ ಸಾಲದ ವಿಚಾರದಲ್ಲಿ ಬಹುಶಃ ಪರಿಗಣಿಸಬಹುದು. ಎ.ಎ. ನಷ್ಟ ಸಂಭಾವ್ಯತೆಯನ್ನು ಬ್ಯಾಂಕ್ ಹೊಣೆಗಳೇ ಮುಂತಾದ ಅಲ್ಪಾವಧಿ ಹಣ ಮಾರುಕಟ್ಟೆ ಸಂಲೇಖಗಳ ವಿಷಯದಲ್ಲಿ ಪರಿಗಣಿಸಬಹುದು.

ಉದರಿ ಹಾಗೂ ಮಾರುಕಟ್ಟೆ ನಷ್ಟಸಂಭಾವ್ಯತೆ: ವಿನಿಯೋಜನವಿನ್ಯಾಸಕ್ಕಾಗಿ ವಿನಿಯೋಜನೆಯ ಸಂಲೇಖಗಳನ್ನು ನಿಗದಿಪಡಿಸಿದ ಮೇಲೆ ಒಟ್ಟಾರೆ ನಷ್ಟಸಂಭಾವ್ಯತೆಯ ಸ್ವೀಕಾರಾರ್ಹ ಮಟ್ಟವೊಂದನ್ನು ಹಮ್ಮಿಕೊಳ್ಳಬೇಕು. ಒಟ್ಟಾರೆ ನಷ್ಟ ಸಂಭಾವ್ಯತೆಯನ್ನು ಉದರಿ ನಷ್ಟ ಸಂಭಾವ್ಯತೆ ಮತ್ತು ಮಾರುಕಟ್ಟೆ ನಷ್ಟ ಸಂಭಾವ್ಯತೆಗಳಾಗಿ ಮರುವಿಂಗಡಿಸಬಹುದು.

ಇವುಗಳಲ್ಲಿ ಮೊದಲನೆಯದು ಮೀಸಲುಗಳ ವಿನಿಯೋಜನೆಯಾಗಿರುವ ವಾಣಿಜ್ಯ ಬ್ಯಾಂಕುಗಳಂಥ ಸಂಸ್ಥೆಗಳ ಕಟಬಾಕಿಯ ನಷ್ಟಸಂಭಾವ್ಯತೆಗೆ ಸಂಬಂಧಿಸಿದೆ.

ಮಾರುಕಟ್ಟೆ ನಷ್ಟ ಸಂಭಾವ್ಯತೆಯನ್ನು ವಾಸ್ತವ ನಷ್ಟಗಳ ಮತ್ತು ಮಾರುಕಟ್ಟೆಯ ಪ್ರತಿಕೂಲ ಚಲನೆಗಳಿಂದ, ಸಾಮಾನ್ಯವಾಗಿ ಬಡ್ಡಿದರಗಳಿಂದ, ಉದ್ಭವಿಸುವ ಅವಕಾಶ ನಷ್ಟ ವೆಚ್ಚಗಳ ನಷ್ಟ ಸಂಭಾವ್ಯತೆ ಎಂದು ವ್ಯಾಖ್ಯಿಸಬಹುದಾಗಿದೆ. ಉದಾಹರಣೆಗೆ, ಬಾಂಡುಗಳನ್ನು ಒಂದು ನಿರ್ದಿಷ್ಟ ಪ್ರತಿಫಲ ದರದಲ್ಲಿ ಕೊಂಡಿದ್ದರೆ, ಮತ್ತು ಮಾರುಕಟ್ಟೆ ಪ್ರತಿಫಲ ದರಗಳು ಅನಂತರ ಏರಿದರೆ ವಾಸ್ತವ ನಷ್ಟಗಳು ಉದ್ಭವಿಸುತ್ತವೆ.

ವಿನಿಯೋಜನವಿನ್ಯಾಸದ ದ್ರವತ್ವ: ಬಂಡವಾಳದಲ್ಲಿ ಗಮನಾರ್ಹ ನಷ್ಟಗಳಾಗದಂತೆ ನಗದು ತಿಲ್ಲುಗಳಾಗಿ ಪರಿವರ್ತಿಸಬೇಕಾದ ಕನಿಷ್ಠ ಶೇಕಡಾವಾರಿನ ನಿರ್ಧಾರ. ಈ ನಿರ್ಬಂಧವು ವಿನಿಯೋಜನ ವಿನ್ಯಾಸ ಒಂದರ ಲಾಭಪ್ರದತೆಯ ಮೇಲೆ ನಿರ್ಣಾಯಕ ಪರಿಣಾಮವನ್ನು ಸ್ಪಷ್ಟವಾಗಿ ಹೊಂದಿದೆ. ಸಾಮಾನ್ಯವಾಗಿ ಮೇಲ್ಮುಗನಾಗಿ ಏರಿಯಾಗುವ ಪ್ರತಿಫಲರೇಖೆಯನ್ನು ಪರಿಭಾವಿಸುವುದಾದರೆ, ಪಕ್ವತೆಯ ಅವಧಿ ದೀರ್ಘವಾದಂತೆ ಪ್ರತಿಫಲವೂ ಏರುತ್ತದೆ. ದೀರ್ಘಾವಧಿಯ ಪಕ್ವತೆಗಳು ಹೆಚ್ಚಿನ ಮಾರುಕಟ್ಟೆ ನಷ್ಟ ಸಂಭಾವ್ಯತೆಯನ್ನು ಒಳಗೊಂಡಿರುತ್ತವೆ. ಆದ್ದರಿಂದ ಒಟ್ಟಾಗಿ ವಿನಿಯೋಜನವಿನ್ಯಾಸದ ದ್ರವತ್ವ, ಅಗತ್ಯಗಳು (ಸಾಮಾನ್ಯವಾಗಿ ಯಾವಾಗಲೂ ಅಲ್ಲ), ಸಾಪೇಕ್ಷವಾಗಿ ಕಡಿಮೆ ಪ್ರತಿಫಲವುಳ್ಳ ಅಲ್ಪಾವಧಿಯ, ಹೆಚ್ಚು ಮಾರಾಟಯೋಗ್ಯವಾದ ಸಂಲೇಖಗಳಿಗೆ ವಿನಿಯೋಜನೆಯನ್ನು ಸೀಮಿತಗೊಳಿಸಬಹುದು. ಕೆಲವು ಕೇಂದ್ರ ಬ್ಯಾಂಕುಗಳು ದ್ರವತ್ವ ಹೆಚ್ಚಿಸಿಕೊಳ್ಳಲು ತನ್ಮೂಲಕ ವಿನಿಯೋಜನವಿನ್ಯಾಸದ ದ್ರವತ್ವದ ತಮ್ಮ ಅಗತ್ಯವನ್ನು ಕಡಿಮೆಗೊಳಿಸಲು ಮತ್ತು ಅಷ್ಟಿಷ್ಟು ದೀರ್ಘ ಅವಧಿಯ ಪಕ್ವತೆಗಳುಳ್ಳ ಸಂಲೇಖಗಳಲ್ಲಿ ವಿನಿಯೋಜಿಸಲು ಅವಕಾಶ ಉಂಟುಮಾಡಿಕೊಳ್ಳುವ ಸಲುವಾಗಿ ಅಂತರರಾಷ್ಟ್ರೀಯ ಬ್ಯಾಂಕುಗಳೊಂದಿಗೆ ಅಥವಾ ಇತರ ಕೇಂದ್ರೀಯ ಬ್ಯಾಂಕುಗಳೊಂದಿಗೆ ಕೈಗಾವಲು ಸೌಲಭ್ಯಗಳನ್ನು ವ್ಯವಸ್ಥೆ ಮಾಡಿಕೊಳ್ಳುತ್ತವೆ.

ಸರಾಸರಿ ವಿನಿಯೋಜನವಿನ್ಯಾಸದ ಅವಧಿ: ಒಟ್ಟು ವಿನಿಯೋಜನವಿನ್ಯಾಸದ ಶ್ರೇಣಿಯ ರೂಪದಲ್ಲಿ ಅಭಿವ್ಯಕ್ತಿಸಬಹುದಾದ (ಕನಿಷ್ಠ 3 ತಿಂಗಳುಗಳಿಂದ ಗರಿಷ್ಠ 15 ತಿಂಗಳುಗಳವರೆಗೆ), ಸರಾಸರಿ ಅವಧಿಯ ಆಯ್ಕೆ: ಬಡ್ಡಿದರಗಳು ಏರುತ್ತಿರುವಾಗ ಅತಿದೀರ್ಘ ಅವಧಿಯವರೆಗೆ ಅಥವಾ ಬಡ್ಡಿದರಗಳು ಇಳಿಯುತ್ತಿರುವಾಗ ಅತಿ ಅಲ್ಪಾವಧಿಯವರೆಗೆ ವಿನಿಯೋಜನ ವಿನ್ಯಾಸ ಬದ್ಧವಾಗಿರದಂತೆ ಖಾತರಿ ಮಾಡಿಕೊಳ್ಳಲು ಈ ಕ್ರಮ.

(ವಿನಿಯೋಜನವಿನ್ಯಾಸ)ದಲ್ಲಿರುವ ಪ್ರತಿಭೂತಿಗಳ ಮೇಲಿನ ನಿರ್ಬಂಧ: ಇದು ಅನೇಕ ರೂಪಗಳನ್ನು ತಳೆಯಬಹುದು. ಉದಾಹರಣೆ ಒಂದು ವರ್ಷಕ್ಕಿಂತ ಹೆಚ್ಚಿನ ಅವಧಿಯ ಪ್ರ ಭೂತಿಗಳ ಮೊಬಲಗಿನ ಮೇಲೆ ಮಿತಿಗಳನ ಹಾಕುವುದು, ಎಲ್ಲಾ ಪ್ರತಿಭೂತಿಗಳ ಸರಾಸ ಅವಧಿಯನ್ನು ನಿರ್ಧರಿಸುವುದು, ಯಾವುದ ಪ್ರತಿಭೂತಿಗೆ ಅನ್ವಯಿಸುವಂತೆ ಗರಿಷ್ಠ ಅವ ಯೊಂದನ್ನು ನಿಗದಿಪಡಿಸುವುದು, ಅಥವ ಒಟ್ಟು ವಿನಿಯೋಜನ ವಿನ್ಯಾಸದಲ್ಲಿ ಯಾವುದ ಪ್ರತಿಭೂತಿಯನ್ನು ಒಂದು ಶೇಕಡಾ ಪ್ರಮಾಣ ಸೀಮಿತಗೊಳಿಸಬಹುದು.

ವಾಣಿಜ್ಯ ಬ್ಯಾಂಕ್ ನಷ್ಟ ಸಂಭಾವ್ಯತೆಗಳ ಮೇ ನಿರ್ಬಂಧಗಳು: ಬ್ಯಾಂಕುಗಳ ಆಯ್ಕೆಯ ಇಲ್ಲಿ ಮೊದಲನೆಯ ಪ್ರಶ್ನೆ. ದೊಡ್ಡ ಕೈಗಾರಿಕಾ ದೇಶಗಳಲ್ಲಿ ಪ್ರಮುಖ ಬ್ಯಾಂಕುಗಳಲ್ಲಿ ಮಾತ್ರ— ಉದಾ: ಹತ್ತು ಅಗ್ರ ಬ್ಯಾಂಕುಗಳಲ್ಲಿ—ಠೇವ ಗಳು, ಠೇವಣಿ ಪ್ರಮಾಣ ಪತ್ರಗಳು ಅಥವಾ ಬ್ಯಾಂಕರ ಸ್ವೀಕೃತಿಗಳು, ಇವನ್ನು ಇಡು ನೀತಿಯನ್ನು ಅನುಸರಿಸಬಹುದು. ಏನೇ ಇರಲಿ ಗಾತ್ರವಿದ್ದಲ್ಲಿ ಮಾತ್ರ ಅದು ಸುರಕ್ಷತೆಯ ಅಳ ಗೋಲೆಂದೇನೂ ಅಲ್ಲ. ಆಯ್ಕೆಯ ಪ್ರಕ್ರಿಯೆಯಲ್ಲಿ ಸ್ವತಂತ್ರ ಬ್ಯಾಂಕ್ ಉದರಿ ವಿಶ್ಲೇಷಣ ಅಭಿಕರಣವೊಂದು ಸಹಾಯಕವಾಗಬಲ್ಲದು. ನಷ್ಟ ಸಂಭಾವ್ಯತೆಯೂ ಕಾಲದ ಒಂದು ಕಾ ಭಾರವಾಗಿರುವುದರಿಂದ, ಉದಾ: ಒಂದು ತಿಂಗ ಗಿಂತ ಹೆಚ್ಚಿನ ಅವಧಿಯ ತೊಡಗಿಸುವಿಕೆಯ ಮೇಲೆ, ಮಿತಿಯೊಂದನ್ನು ವಿಧಿಸಬಹುದು. ಜೊತೆಗೆ, ಒಟ್ಟಾರೆ ಮಿತಿಯೊಂದನ್ನು ಮತ್ತು ಪ್ರತಿಯೊಂದು ಬ್ಯಾಂಕಿಗೂ ಮಿತಿಗಳನ್ನು ಸ್ಥಾಪಿಸಬಹುದು. ಕೆಲವು ಕೇಂದ್ರ ಬ್ಯಾಂಕುಗಳು ವಾಣಿಜ್ಯ ಬ್ಯಾಂಕುಗಳೊಂದಿಗೆ ವ್ಯವಹಾರಕ್ಕೆ ಸಂಬಂಧಿಸಿದ ನಷ್ಟ ಸಂಭಾವ್ಯತೆಗಳನ್ನು ನಿವಾರಿಸಿಕೊಳ್ಳಲು ಇತರ ಕೇಂದ್ರ ಬ್ಯಾಂಕುಗಳಲ್ಲಿ ಅಥವಾ ಅಂತರರಾಷ್ಟ್ರೀಯ ಇತ್ಯರ್ಥ ಬ್ಯಾಂಕಿನಲ್ಲಿ ಠೇವಣಿಯಾಗಿ ನಿಧಿಗಳನ್ನಿಡುತ್ತವೆ. ಆದರೆ ಆಗ ಅವು ಕಡಿಮೆ ನಷ್ಟ ಸಂಭಾವ್ಯತೆಯಲ್ಲಿ ವ್ಯವಹರಿಸುತ್ತವೆ.

ಸ್ವತಂತ್ರ ಸರ್ಕಾರದ ನಷ್ಟ ಸಂಭಾವ್ಯತೆಯ ಮೇಲೆ ಮಿತಿಗಳು: ಸಂಭಾವ್ಯ ಕಟಬಾಕಿಯ ಪರಿಣಾಮವನ್ನು ಕಡಿಮೆಗೊಳಿಸಲು, ಪ್ರತಿಯೊಂದು ಸರ್ಕಾರಕ್ಕೂ ಪ್ರತ್ಯೇಕ ಮಿತಿಯೊಂದನ್ನು ಮತ್ತು ಪ್ರಮುಖ ಕೈಗಾರಿಕಾ ದೇಶಗಳನ್ನು ಬಿಟ್ಟು ಇತರ ಎಲ್ಲ ದೇಶಗಳ ಸರ್ಕಾರಗಳಿಗೆ ಸಾರ್ವತ್ರಿಕ ಮಿತಿಯೊಂದನ್ನು ನಿರ್ದಿಷ್ಟಪಡಿಸುವುದು ಅಪೇಕ್ಷಣೀಯವಾಗಬಹುದು.

ವಿನಿಯೋಜನ ವಿನ್ಯಾಸ ನಿರ್ವಹಣಾ ತಂತ್ರಗಳು: ಹಮ್ಮಿಕೊಂಡ ನಿರ್ಬಂಧಗಳ ಮಿತಿಯೊಳಗೆ, ಮತ್ತು ಮೇಲೆ ಹೇಳಲಾದ ಗಣನೆಗಳ ಬೆಳಕಿನಲ್ಲಿ, ಮೀಸಲುಗಳನ್ನು ಸಕ್ರಿಯವಾಗಿ ನಿರ್ವಹಿಸುವುದು ಮೀಸಲುಗಳ ದೈನಂದಿನ ನಿರ್ವಹಣೆಯನ್ನು ಕುರಿತ ಮೂಲಭೂತ ಅಭಿ

ಗಮನವಾಗಿರಬೇಕು. ವಿನಿಯೋಜನ ವಿನ್ಯಾಸದ ಮೇಲಣ ಪ್ರತಿಫಲಗಳನ್ನು ಸುಧಾರಣೆಗೊಳಿಸಲು ಅನೇಕ ಜಾಣ್ಮೆಯ ಆಯ್ಕೆಗಳು ಅಥವಾ ತಂತ್ರಗಳು ಲಭ್ಯವಿವೆ.

**ವಿನಿಯೋಜನ ವಿನ್ಯಾಸದ ಒಟ್ಟಾರೆ ಸರಾಸರಿ ಅವಧಿಯ ವ್ಯತ್ಯಾಸ:** ವಿನಿಯೋಜನವಿನ್ಯಾಸ ಒಂದರ ನಿರ್ವಹಣೆಯಲ್ಲಿ ಇದು ಅತ್ಯಂತ ನಿರ್ಣಾಯಕ ಚರಾಂಶ ಮತ್ತು ಇದು ಅಂತರ ರಾಷ್ಟ್ರೀಯ ಮಾರುಕಟ್ಟೆಗಳಲ್ಲಿಯ ಬಡ್ಡಿದರಗಳನ್ನು ಕುರಿತ ಬದಲಾಗುತ್ತಿರುವ ನಿರೀಕ್ಷೆಗಳಿಗೆ ಸ್ಪಂದಿಸುತ್ತದೆ. ಆದ್ದರಿಂದ ಸರಾಸರಿ ಅವಧಿಯಲ್ಲಿಯ ಬದಲಾವಣೆಯ ಕಾಲನಿಯಮನವು ವಿನಿಯೋಜನ ವಿನ್ಯಾಸದ ಸಾಧನೆಯ ಮೇಲೆ ನಿರ್ಣಾಯಕವಾಗಿ ಪರಿಣಾಮ ಬೀರುತ್ತದೆ.

**ವಿಭಿನ್ನ ಸಂಲೇಖಗಳ ನಡುವಣ ಪ್ರತಿಫಲದಲ್ಲಿಯ ಅಂತರಗಳು:** ಹಲವೊಮ್ಮೆ ಸಮಪಕ್ವತೆಯ ವಿವಿಧ ಸಂಲೇಖಗಳ ಮೇಲಣ ಪ್ರತಿಫಲಗಳು ಕಾಲಾನುಗುಣವಾಗಿ ಗಮನಾರ್ಹವಾಗಿ ವ್ಯತ್ಯಾಸಗೊಳ್ಳಬಹುದು. ಪ್ರತಿಫಲಗಳನ್ನು ಹೆಚ್ಚಿಸಿಕೊಳ್ಳುವ ಸಲುವಾಗಿ ಆಸ್ತಿಗಳನ್ನು ವಿಕ್ರಯಿಸಲು ಇದು ಅವಕಾಶವನ್ನು ಒದಗಿಸುತ್ತದೆ.

**ಪ್ರತಿಫಲ ಅಂತರಗಳ ಪ್ರಯೋಜನ ಪಡೆಯಲು ವಿನಿಯೋಜನೆಗಳ ಪಕ್ವತಾಪೂರ್ವ ವಿಕ್ರಯ:** ಬಡ್ಡಿದರಗಳು ಸ್ಥಿರವಾಗಿರುವಾಗ ಅಥವಾ ಇಳಿಯುತ್ತಿರುವಾಗ, ವಿನಿಯೋಜಿತ ಸಂಲೇಖಗಳನ್ನು ಅವು ಪಕ್ವವಾಗುವ ಮುನ್ನ ವಿಕ್ರಯಿಸುವುದರಿಂದ ಹಿಡುವಳಿ ಅವಧಿಯಲ್ಲಿ ಗಳಿಸಿದ ಪ್ರತಿಫಲವನ್ನು ಸುಧಾರಿಸುವುದು ಕೆಲವೊಮ್ಮೆ ಸಾಧ್ಯ. "ಪ್ರತಿಫಲರೇಖೆಯ ಮೇಲಣ ಸವಾರಿ" ಎಂದು ಇದನ್ನು ಹೇಳಲಾಗುತ್ತದೆ.

ಈ ನಾನಾ ತಂತ್ರಗಳನ್ನು ಬಳಸುವಲ್ಲಿ ಕೇಂದ್ರ ಬ್ಯಾಂಕಿನ ಸಾಮರ್ಥ್ಯವು ಪ್ರಮುಖ ಮಾರುಕಟ್ಟೆಗಳೊಂದಿಗೆ ಅದು ಹೊಂದಿರುವ ಸಂಪರ್ಕಗಳನ್ನು ಮತ್ತು ವಿನಿಯೋಜನ ಅಭಿಕರ್ತರು, ಅಥವಾ ಅವರ ಸಂವಾದಿ ಪಕ್ಷಗಳನ್ನು ಕುರಿತಂತೆ ಅದರ ಆಯ್ಕೆಯನ್ನು ನಿರ್ಣಾಯಕವಾಗಿ ಅವಲಂಬಿಸಿರುತ್ತದೆ. ಮಾರುಕಟ್ಟೆ ಮಾಹಿತಿಯ ಮತ್ತು ಅರಿವಿನ ತೃಪ್ತಿಕರ ಹರಿವು ಹಾಗೂ ಇದನ್ನು ವಿಶ್ಲೇಷಿಸುವ ಸಾಮರ್ಥ್ಯ, ಇವು ಅಗತ್ಯ. ವಿನಿಯೋಜನೆಗಳನ್ನು ಕುರಿತ, ನೇರವಾದ ನಿರ್ಧಾರಣಕಾರ್ಯ ಇವಕ್ಕೆ ಬೆಂಬಲವಾಗಿರಬೇಕು.

**ಅಧೋರಚನಾತ್ಮಕ ಸೇವೆಗಳು:** ಕೇಂದ್ರ ಬ್ಯಾಂಕೊಂದರ ಯಾವುದೇ ವಿನಿಯೋಜನ ತಂತ್ರವನ್ನು ಜಾರಿಗೆ ತರುವಲ್ಲಿ ಮಾನವ ಹಾಗೂ ಭೌತ ಸಂಪನ್ಮೂಲಗಳಿಗೂ ಮುಖ್ಯಪಾತ್ರವೊಂದಿದೆ ಎಂಬುದು ಸ್ಪಷ್ಟ. ಮಾರುಕಟ್ಟೆ ಸೂಚಿಗಳಂಥ ಸ್ಥಾಪಿತ ಮಟ್ಟ ಗುರುತುಗಳ ಇದಿರಿನಲ್ಲಿ ಸಾಧನೆಯನ್ನು ಅವಲೋಕಿಸುವ ಪ್ರಕ್ರಿಯೆಗೆ ನಿಖರವಾದ ಮತ್ತು ಸಕಾಲಿಕವಾದ ಲೆಕ್ಕಬರಹ ಹಾಗೂ ವ್ಯವಸ್ಥಾಪನ ಮಾಹಿತಿ ಕುರಿತ ಸುವ್ಯವಸ್ಥೆಯೊಂದು ಅಗತ್ಯ. ಗಣಕೀಕೃತ ವಿಧಾನಗಳು ಈ ಪ್ರಕ್ರಿಯೆಯನ್ನು ಇನ್ನಷ್ಟು ಪರಿಣಾಮಕಾರಿಯಾಗಿ ಮಾಡಬಲ್ಲುವು.

ಕೇಂದ್ರೀಯ ಬ್ಯಾಂಕು ಆಯ್ಕೆಮಾಡಿಕೊಂಡ ಯಾವುದೇ ತಂತ್ರವನ್ನು ಜಾರಿಗೊಳಿಸಲು ಸಾಂಘಿಕ ಸಂರಚನೆ ಮತ್ತು ಸಿಬ್ಬಂದಿ ವ್ಯವಸ್ಥೆಗಳು ಸಾಕಷ್ಟು ಇರಬೇಕು. ವಹಿವಾಟುದಾರರ ಮತ್ತು ವಿಶ್ಲೇಷಕರ ತರಬೇತಿಯೂ ಅತ್ಯಂತ ಮುಖ್ಯ. ಜ್ಯೇಷ್ಠ ಅಧಿಕಾರಿಯೊಬ್ಬನ, ಉದಾಹರಣೆಗೆ ಉಪಗವರ್ನರ್ ಮಟ್ಟದವನೊಬ್ಬನ ಅಧ್ಯಕ್ಷತೆಯಲ್ಲಿ ವಾರಕ್ಕೊಂದರಂತೆ ಸೇರುವ ವಿನಿಯೋಜನ ಸಮಿತಿಯ ಸಭೆ ಯಾವುದೇ ಕೇಂದ್ರ ಬ್ಯಾಂಕಿನಲ್ಲಿ ಬಹು ಉಪಯುಕ್ತ ಪಾತ್ರ ವಹಿಸಬಹುದು. ಬಡ್ಡಿ ದರ ಪ್ರವೃತ್ತಿಗಳಂಥ ಮೂಲಭೂತ ಪ್ರಶ್ನೆಗಳನ್ನು ಪರಿಶೀಲಿಸುವಲ್ಲಿ ಮತ್ತು ಕರಾರುವಾಕ್ಕಾದ ಆರ್ಥಿಕ ಮುನ್ನೋಟಗಳನ್ನು ಒದಗಿಸುವುದರಲ್ಲಿ ಹಾಗೂ ಪ್ರಮುಖ ದೇಶಗಳಲ್ಲಿಯ ಮಾರುಕಟ್ಟೆ ಪ್ರವೃತ್ತಿಗಳನ್ನು ವಿಶ್ಲೇಷಿಸುವಲ್ಲಿ ಸಂಶೋಧನಾ ವಿಭಾಗ ಪಾಲ್ಗೊಳ್ಳುವುದರಿಂದಲೂ ಸಹಾಯವಾಗಬಲ್ಲುದು. ●

---

## ಬ್ಯಾಂಕಿಂಗ್ ಕಮ್ಮಟ

ಪ್ರತಿ ಆರು ತಿಂಗಳಿಗೆ ಒಂದರಂತೆ ಕರ್ನಾಟಕದ ಬೇರೆ ಬೇರೆ ಜಿಲ್ಲೆಗಳಲ್ಲಿ ಸಮನ್ವಯ ಸಮಿತಿಯ ಆಶ್ರಯದಲ್ಲಿ ನಡೆಸುತ್ತಿರುವ ಬ್ಯಾಂಕಿಂಗ್ ಕಮ್ಮಟ ತೊಂಬತ್ತು ದಿನಗಳನ್ನು ಪೂರೈಸಿದೆ. **ನೂರನೆಯ ದಿನದ ಹಬ್ಬ** ಬೆಂಗಳೂರಿನಲ್ಲಿ ಸೆಪ್ಟೆಂಬರ್ ಕೊನೆಯ ವಾರದಲ್ಲಿ ನಡೆಯಲಿದೆ.

ವಿವರಗಳಿಗೆ

ಗೌರವ ಪ್ರಧಾನ ಕಾರ್ಯದರ್ಶಿ
ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳ ಸಮನ್ವಯ ಸಮಿತಿ
ಭಾರತೀಯ ಸ್ಟೇಟ್ ಬ್ಯಾಂಕ್, ನಗರ ಶಾಖೆ
೨೨ ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು 560 002

---

# ಇವನ್ನು ಬಲ್ಲಿರಾ?

ವಿಶ್ವದ ಅತ್ಯಂತ ಭಾರಿ ವಾಣಿಜ್ಯ ಬ್ಯಾಂಕ್ ಜಪಾನಿನ ದಾಯ್ ಇಚಿಕಂಗ್ಯೊ. ಸ್ವತ್ತಿನ ಮೌಲ್ಯ 390 ಬಿಲಿಯನ್ ಡಾಲರುಗಳು. ಹಿಂದೆ ಒಂದನೇ ಸ್ಥಾನ ಗಳಿಸಿದ್ದ ಬ್ಯಾಂಕ್ ಆಫ್ ಅಮೇರಿಕ ಈಗ 11ನೇ ಸ್ಥಾನ ಗಳಿಸಿದೆ.

(ವೃತ್ತ ಪತ್ರಿಕೆ ಸಮಾಚಾರ)

* * *

ಹಿಂದಿನ ಶತಮಾನದಲ್ಲಿ ಬ್ಯಾಂಕ್ ರಜಾದಿನಗಳನ್ನು ರಾಷ್ಟ್ರೀಯ ರಜಾ ದಿನಗಳೆಂದು ಘೋಷಿಷಲಾಗುತ್ತಿತ್ತು.

(ವೈಶ್ಯಾ ಬ್ಯಾಂಕ್ ಜಾಹಿರಾತು)

* * *

ನ್ಯಾಸಧಾರಿ ಹಾಗೂ ಅಭಿರಕ್ಷಕನಾಗಿ ಸೇವೆ ಸಲ್ಲಿಸುವುದು ಬ್ಯಾಂಕರನ ಪ್ರಮುಖ ಕಾರ್ಯಗಳಲ್ಲೊಂದು. ಇದು ರಾಮಾಯಣ ಕಾಲದಲ್ಲಿಯೂ ಇತ್ತು. ಚೋರ ಭಯದಿಂದ ಪಾರಾಗಲು ಅಮೂಲ್ಯವಾದ ವಸ್ತುಗಳನ್ನು ಬೇರೆಯವರ ಮನೆಯಲ್ಲಿ ರಕ್ಷಣಾರ್ಥವಾಗಿಡುತ್ತಿದ್ದರು. ಇದಕ್ಕೆ 'ನ್ಯಾಸವಿಧಿ' ಎಂದು ಹೆಸರು.

(ರಾಮಾಯಣ ಅರಣ್ಯಕಾಂಡ)

* * *

ಅಧಿಕೃತವಾಗಿ ಪ್ರಥಮತಃ ಮುದ್ರಿತವಾದ ಚೆಕ್ 1762ರಲ್ಲಿ ಬಂತು. ಇದಕ್ಕೆ ಮುಂಚೆ ಕರವಸ್ತ್ರ, ಕೋಳಿಮೊಟ್ಟೆ, ತಟ್ಟೆಗಳ ಮೇಲೆ, ಪ್ರಾಣಿಗಳ ಬೆನ್ನಿನ ಮೇಲೆ, ಮರದ ತೊಗಟೆಯ ಮೇಲೆ, ಸಿಗರೇಟ್ ಕಾಗದ, ವಿಸಿಟಿಂಗ್ ಕಾರ್ಡುಗಳ ಮೇಲೆ ಚೆಕ್ ಬರೆದು ನಗದೀಕರಿಸುತ್ತಿದ್ದರು.

(ಬಿಸನೆಸ್ ಇಂಡಿಯಾ)

* * *

ಕರಾಳ ಸೋಮವಾರ: ಷೇರು ಪೇಟೆಯ ಅತ್ಯಂತ ಭಾರಿ ಕುಸಿತ ವಿಶ್ವದಲ್ಲಿ 3 ಬಾರಿ ಉಂಟಾಗಿದೆ. ಇದು ಸಂಭವಿಸಿದ್ದು ಸೋಮವಾರವಾದ್ದರಿಂದ, ಇದನ್ನು ಕಪ್ಪು ಸೋಮವಾರ (ಬ್ಲಾಕ್ ಮಂಡೇ) ಎಂದು ಕರೆಯುವರು.

(ವರ್ಲ್ಡ್ ದಿಸ್ ವೀಕ್)

* * *

ಪಾಕಿಸ್ತಾನದ ಪ್ರಮುಖ ವಾಣಿಜ್ಯ ಬ್ಯಾಂಕುಗಳು ಹಬೀಬ್ ಬ್ಯಾಂಕ್, ಮುಸ್ಲಿಮ್ ಕಮರ್ಷಿಯಲ್ ಬ್ಯಾಂಕ್ ಮತ್ತು ದಾದಾಭಾಯ್.

* * *

ಗ್ರಿಂಡ್ಲೇಸ್ ಬ್ಯಾಂಕಿನ ಹಿಂದಿನ ಹೆಸರು ನ್ಯಾಷನಲ್ ಗ್ರಿಂಡ್ಲೇಸ್ ಬ್ಯಾಂಕ್; ಇಂದು ANZ ಗ್ರಿಂಡ್ಲೇಸ್ ಬ್ಯಾಂಕ್. ಭಾರತದ ಹಳೆಯ ವಿದೇಶಿ ಬ್ಯಾಂಕುಗಳ ಪೈಕಿ ಇದು ಪ್ರಮುಖವಾದುದು. ವಣಿಕ ಬ್ಯಾಂಕಿಂಗ್ ಸ್ಥಾಪನೆಯಲ್ಲಿ ಪಿತೃಸ್ಥಾನ ಗಳಿಸಿದೆ.

ಯೂನಿಟ್ ಟ್ರಸ್ಟ್ ಆಫ್ ಇಂಡಿಯ ಭಾರತದಲ್ಲೇ ಅತ್ಯಂತ ದೊಡ್ಡದಾದ ಪರಸ್ಪರ ನಿಧಿ ಸಂಸ್ಥೆ.

* * *

ಭಾರತದಲ್ಲಿ ಒಟ್ಟು 96 ಲಾಟರಿಗಳು ಚಾಲ್ತಿಯಲ್ಲಿವೆ. 1967ರಲ್ಲಿ ಕೇರಳ ಪ್ರಥಮವಾಗಿ ಲಾಟರಿ ಯೋಜನೆ ಹೊರಡಿಸಿತು.

* * *

ನವದೆಹಲಿಯ ಪರಿಷತ್ ಸಹಕಾರಿ ಬ್ಯಾಂಕ್‌ನಲ್ಲಿರುವ ಸದಸ್ಯರೆಲ್ಲರೂ ಪರಿಶಿಷ್ಟ ವರ್ಗ ಜಾತಿಗೆ ಸೇರಿದವರು.

(ವೃತ್ತಪತ್ರಿಕೆ ಸಮಾಚಾರ)

* * *

ಸಂಯುಕ್ತ ಅರಬ್ ಎಮಿರೇಟ್ಸ್‌ನ ಖಾಲಿದ್ ಬ್ಯಾಂಕ್‌ಗೆ 'ಬ್ಯಾಂಕ್ ಆಫ್ ಪರದಾ' ಎಂದು ಹೆಸರು. ಇಲ್ಲಿಯ ಸಿಬ್ಬಂದಿ ವರ್ಗದವರೆಲ್ಲರೂ ಮಹಿಳೆಯರು. ಬ್ಯಾಂಕಿನ ಅಧ್ಯಕ್ಷ ಭೇಟಿಕೊಡಬೇಕಾದರೆ ಪೂರ್ವ ಅನುಮತಿಯೊಂದಿಗೇ ಬರಬೇಕು. ಜಂಟಿ ಖಾತೆ ಇಲ್ಲ. ಇದುವರೆಗೂ ಒಂದು ಉದರಿ ಪತ್ರದ ವ್ಯವಹಾರವೂ ಇಲ್ಲ. ಪುರುಷರೊಂದಿಗೆ ದೂರವಾಣಿ ಸಂಪರ್ಕವಿಲ್ಲ.

(ವೃತ್ತಪ್ರತ್ರಿಕೆ ಸಮಾಚಾರ)

* * *

ಚಿಟ್ ಫಂಡ್ ಭಾರತ ಒಂದಕ್ಕೇ ಮೀಸಲಾಗಿಲ್ಲ. ವಿದೇಶಗಳಲ್ಲಿಯೂ ಇದೆ. ಜಪಾನಿನಲ್ಲಿ 'ಕೊ', ಚೈನಾದಲ್ಲಿ 'ಹುಯ್', ಕೊರಿಯಾದಲ್ಲಿ 'ಕೈ', ನೈಜೀರಿಯಾದಲ್ಲಿ 'ಇಸೂಸು', ಬೆಲ್ಜಿಯಂನಲ್ಲಿ 'ಸಿಂಡಿಕೇಟ್' ಮತ್ತು ವಿಶ್ವಬ್ಯಾಂಕಿನಲ್ಲಿ 'ಸಂಚಾರಿ ಉಳಿತಾಯ ಮತ್ತು ಉದರಿ ಸಂಘ (ROSCA)' ಎಂದು ಇದನ್ನು ಕರೆಯುವರು.

(ಬಿಸಿನೆಸ್ ವರ್ಲ್ಡ್)

* * *

ಸೇವೆಯ ಗರಿಷ್ಠತೆ: ಇಂಗ್ಲೆಂಡಿನ ನ್ಯಾಷನಲ್ ವೆಸ್ಟ್‌ಮಿನ್‌ಸ್ಟರ್ ಬ್ಯಾಂಕ್ (ನ್ಯಾಟ್ ವೆಸ್ಟ್) ಗ್ರಾಹಕ ಸೇವೆಗೆ ಹೆಸರಾಂತ ಬ್ಯಾಂಕ್. ಇವರ ಜಾಹೀರಾತಿನ ವೆಚ್ಚ ಸುಮಾರು 2.5 ಲಕ್ಷ ಡಾಲರುಗಳು. ದೂರವಾಣಿ ಮೂಲಕ ಬ್ಯಾಂಕನ್ನು ಸಂಪರ್ಕಿಸಿದಲ್ಲಿ ನಮ್ರತೆಯ ಉತ್ತರ ಸಿಗದ ಗ್ರಾಹಕ 5 ಡಾಲರ್ ಬಹುಮಾನಕ್ಕೆ ಅರ್ಹನಾಗಿರುತ್ತಾನೆ. ವೈಯಕ್ತಿಕ ಸಾಲದ ಅರ್ಜಿ ೨೪ ಗಂಟೆಗಳೊಳಗೆ ವಿಲೇವಾರಿಯಾಗದಿದ್ದರೆ ಅರ್ಜಿದಾರ 50 ಡಾಲರ್ ಬಹುಮಾನಕ್ಕೆ ಅರ್ಹನಾಗುತ್ತಾನೆ.

(ಬಿಸನೆಸ್ ಇಂಡಿಯಾ)

ಸಂಗ್ರಹ: ಸಿ. ಗೋ.

